

ಜೀವನ್ ಮತ್ತು ಹನುಮರ ಸತ್ಯಶೋಧಕ ಜೋಡಿಯ ಹೊಸ ಸಂಗ್ರಹ:
ರೋಮಾಂಚಕ ವಸ್ತುಸ್ಥಿತಿಗಳು!
ಪ್ರಪಂಚದ ತೀವ್ರತಮ ಓಟಗಾರಿಕೆಯ ಪ್ರಾಣಿ ಚಿರತೆ ತಾಸಿಗೆ 70 ಮೈಲಿನ ವೇಗ ಮುಟ್ಟುವುದಾಗಿ ತಿಳಿದುಬಂದಿದೆ.
ಜಗತ್ತಿನ ಅತಿ ಉದ್ದದ ಜಿಗಿತ ಕಂಗಾರೂವಿನ 42 ಅಡಿಗಳ ನೆಗೆತ ಒಲಿಂಪಿಕ್ ದಾಖಲೆಗಿಂತ 12 ಅಡಿ 9 ಇಂಚು ಅಧಿಕ!
ವಿಶ್ವದ ಅತಿದೊಡ್ಡ ಗಾತ್ರದ ಜೀವಿ- 106 ಅಡಿ ಉದ್ದ, 195 ಟನ್ ಭಾರದ ತಿಮಿಂಗಿಲ.
ವಿಶ್ವದ ಸಮುದ್ರಗಳಲ್ಲಿ ಅತಿ ಉಪ್ಪಾದ ಸಮುದ್ರವು ಜೋರ್ಡಾನ್ ಮತ್ತು ಇಸ್ರಾಯೆಲ್‌ನ ನಡುವಿರುವ 'ಡೆಡ್ ಸೀ'. ನಾವು ಅದರ ಮೇಲೆ ಕುಳಿತುಕೊಳ್ಳಬಹುದು, ಅಷ್ಟು ದಪ್ಪವಿದೆ ಅದರ ನೀರು.
ಪೃಥ್ವಿಯ ಅತಿದೊಡ್ಡ ವೃಕ್ಷ ಕೆಲಿಫೋರ್ನಿ ದಲ್ಲಿರುವ 'ಜನರಲ್ ಶೆರ್ಮಾನ್' ಅಡ್ಡಹೆಸರಿನ 272 ಅಡಿ ಎತ್ತರ ಹಾಗೂ 30 ಅಡಿ ಅಡ್ಡಳತೆಯ (ವ್ಯಾಸ) ಒಂದು 'ಸಿಕ್ವೋಯಾ' ಮರ
ನಿಮ್ಮ ಭವಿಷ್ಯದ ರಕ್ಷಣೆಗೆ ಅತ್ಯಂತ ಸುಲಭ, ಸುಭದ್ರ ಉಪಾಯ, ಜೀವವಿಮೆ, ಅದರ ಬಗ್ಗೆ ಹೆಚ್ಚು ಮಾಹಿತಿ ಸಂಗ್ರಹಿಸಿರಿ.
ಭಾರತೀಯ ಜೀವವಿಮಾ ನಿಗಮ
ಬರುವ ಸಲ: ಜೀವನ್–ಹನುಮ ರಹಸ್ಯಗಳ ಜಾಡೆಯಲ್ಲಿ.
daCunha-LIC-90 KN




DENTAL CREAM
Flash
DENTAL CREAM
Flash

# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'

ಸಂಚಾಲಕರು : ನಾಗಿರೆಡ್ಡಿ

---

**ಕೀ**ರ್ತಿಕಾಂಕ್ಷೆಯಿಲ್ಲದಿದ್ದರೆ ಯಾವ ಮಹತ್ಕಾರ್ಯಗಳೂ ಸಾಗಲಾರವು. ದೊಡ್ಡ ಕೆಲಸಗಳನ್ನು ಮಾಡಲು ಪ್ರೇರೇಪಿಸುವುದು ಅಪೇ. ಅಂತಲೇ ಅನೇಕ ಕೀರ್ತಿಶಾಲಿಗಳನ್ನು ನಾವು ನೋಡುತ್ತೇವೆ. ಅವರೆಲ್ಲ ಸ್ವತಃ ಒಂದೊಂದು ಕೆಲಸದಲ್ಲಿ ಸಿದ್ಧಹಸ್ತರೇ ಹೊರತು, ಈ ಸಂಚಿಕೆಯ ಬೇತಾಳ ಕಥೆಯಲ್ಲಿ ಬರುವ ಮುಕುಂದನಂಥವರಲ್ಲ. "ಕೀರ್ತಿಕಾಂಕ್ಷೆ" ಎಂಬ ಆ ಕಥೆಯಲ್ಲಿ ಕಡೆಗೆ ಮುಕುಂದನಿಗೆ ತಮ್ಮ ಕೈಯಳವಿನೊಳಗಿನ ಕೆಲಸದಲ್ಲೇ ಕೀರ್ತಿ ಬರುತ್ತದೆಂದೂ, ಇನ್ನೊಬ್ಬರನ್ನು ಅನುಕರಿಸುವುದರಿಂದಲ್ಲವೆಂದೂ ನಿಜ ಸಂಗತಿ ಗೊತ್ತಾಗುತ್ತದೆ.

## ಅಮರವಾಣಿ

**ಅನಾಹೂತೇ ಪ್ರವೇಶಶ್ಚಾಪ್ಯಪೃಷ್ಟೇ ಬಹುಭಾಷಣಮ್**
**ಸ್ವಾಸ್ತುತಿಶ್ಚಾತ್ಮ ವರ್ಣಸ್ಯ ಇತ್ಯೇವಂ ಮೂರ್ಖಲಕ್ಷಣಮ್**

ಕರೆಯಿಲ್ಲದೆ ಹೋಗುವುದೂ, ಮಾತಾಡಿಸದೆಯೇ ಮಾತಾಡುವುದೂ, ಆತ್ಮಸ್ತುತಿಯೂ ಮೂರ್ಖತೆಯ ಲಕ್ಷಣಗಳು.

---

ಸಂಪುಟ: ೬೫ ಸೆಪ್ಟೆಂಬರ್ '೮೦ ಸಂಚಿಕೆ: ೩

---

**ಬಿಡಿ ಪ್ರತಿ ರೂ. ೧-೫೦ : : ವಾರ್ಷಿಕ ಚಂದಾ ರೂ. ೧೮-೦೦**



# ಪ್ರಶ್ನೋತ್ತರಗಳು

**ಗಾಧಿಮುರಳಿ, ನರ್ಸಾಪುರಂ, ಆಂಧ್ರ**

ಪ್ರ: ಭಾಷೆಗಳು ಹೇಗೆ ಹುಟ್ಟಿದುವು? ಲಿಪಿ ಇಲ್ಲದ ಭಾಷೆಗಳು ಹೇಗೆ ಏರ್ಪಟ್ಟುವು? ಲಿಪಿ ಇಲ್ಲದ ಭಾಷೆಯಲ್ಲಿ ಉತ್ತರ ಪ್ರತ್ಯುತ್ತರಗಳನ್ನು ಹೇಗೆ ತಿಳಿಸುವುದು?

ಉ: ವಸ್ತುಗಳಿಗೂ, ಗುಣಗಳಿಗೂ, ಕ್ರಿಯೆಗಳಿಗೂ ಸಂಕೇತಗಳಾಗಿ ಕೂಡಿರುವಂತಹುದೇ ಭಾಷೆ. ಇತರ ಪ್ರಾಣಿಗಳ ಹಾಗೆ ಅಪ್ಪಟವಾದ ಸಹಜ ಪ್ರೇರಣೆಗಳಷ್ಟೇ ಮನುಷ್ಯರ ಬೆಳವಣಿಗೆಗೆ ಸಾಲವು. ಮನುಷ್ಯನ ಮೆದುಳಿಗೆ ಬಂದ ಪರಿಣಾಮದ ಮೂಲಕವಾಗಿ, ಅವನು ತನ್ನ ಸುತ್ತುಮುತ್ತಲನ್ನು ಮಾರ್ಪಡಿಸಿ, ಅನುಭವದ ಮೂಲಕ ಜ್ಞಾನವನ್ನು ಸಂಪಾದಿಸಿಕೊಂಡನು. ಅವನ ಅನುಭವವನ್ನು ಅವನಿಂದ ಬೇರೆಯವರು ಅನುಕರಣೆಯ ಮೂಲಕ ಸ್ವಲ್ಪಮಟ್ಟಿಗೆ ಕಲಿತುಕೊಳ್ಳಬಹುದು. ಆದರೆ ಅದು ಪೂರ್ತಿಯಾಗಿ ಇನ್ನೊಬ್ಬರಿಗೆ ತಿಳಿಯಬೇಕಾದರೆ ಅವರ ಅನುಭವಗಳಿಗೆ ಜತೆಯಾಗಿ ಸಂಕೇತಗಳೂ ಬೇಕಾಗುತ್ತವೆ. ಕೆಲವು ಗಿಡಗಳೋ, ಕಾಯಿಗಳೋ ತಿನ್ನಲು ಯೋಗ್ಯವಾದುವೆಂದು ಮನುಷ್ಯರು ಅನುಭವದ ಮೂಲಕ ತಿಳಿದುಕೊಂಡರೆ, ಆ ತಿನ್ನುವ ವಸ್ತುಗಳಿಗೆ ಹೆಸರುಗಳಿದ್ದರೆ ಆ ಹೆಸರುಗಳು ಎಲ್ಲರಿಗೂ ತಿಳಿದು ಪ್ರಚಾರಕ್ಕೆ ಬರುತ್ತವೆ. ಅವು ತಿನ್ನಬಹುದಾದುವೆಂಬುದನ್ನು ಅವುಗಳ ಸಂಗತಿ ಸುತರಾಂ ತಿಳಿಯದವರಿಗೂ ಅದು ಉಪಯುಕ್ತವಾದ ಜ್ಞಾನವೇ ಆಗುತ್ತದೆ. ಇಂತಹ ವಿಷಯಗಳ ಸಂಕೇತ ಶಬ್ದಗಳ ಪ್ರಚಾರಕ್ಕೆ ಲಿಪಿ ಬೇಕಾಯಿತು.

ಭಾಷೆಗಳು ಹುಟ್ಟಿದ ಮೇಲೆಯೇ ಲಿಪಿ ಹುಟ್ಟಿದೆ. ಭಾಷೆಗಳ ಹಾಗೆಯೇ ಲಿಪಿ ಕೂಡಾ ಒಂದು ಕೃತ್ರಿಮ ಸಾಂಪ್ರದಾಯವಾಗಿದೆ. "ಹಾವು" ಎಂದು ಪ್ರಾಣಿಯನ್ನು ನೋಡಿ ಕೂಗಿದರೆ ಆ ಭಾಷೆ ತಿಳಿದವನಿಗಷ್ಟೇ ಅದೊಂದು ಪ್ರಾಣಾಪಾಯದ ಪ್ರಾಣಿ ಎಂದು ಗೊತ್ತಾಗುತ್ತದೆ. ಹಾಗೆಯೇ ಲಿಪಿ ಕೂಡಾ ಅದರ ಅರ್ಥ ತಿಳಿದವರಿಗಷ್ಟೇ ಉಪಯೋಗ. ಆದರೆ ಲಿಪಿಯನ್ನು ಬೇರೆ ಭಾಷೆಯವರು ಕೂಡಾ ಉಪಯೋಗಿಸಿಕೊಳ್ಳಬಹುದು.

ಲಿಪಿಯಿಂದ ಭಾಷೆಗಳು ವಿಸ್ತೃತವಾಗಿ ಪ್ರಚಾರಗೊಳ್ಳುತ್ತವೆ. ಎಂದೂ ಒಬ್ಬರನ್ನೊಬ್ಬರು ನೋಡಿಕೊಳ್ಳದವರೂ, ಅನೇಕ ಸಾವಿರ ಮೈಲು ದೂರದಲ್ಲಿರುವವರೂ ಉತ್ತರ ಪ್ರತ್ಯುತ್ತರಗಳ ಮೂಲಕ ಮಿತ್ರರಾಗಲು ಸಾಧ್ಯವಿದೆ. ಪ್ರೇಮ ಉಂಟಾಗಲೂ ಸಾಧ್ಯವಿದೆ.

ಇಂಗ್ಲೀಷು ಭಾಷೆಗೆ ಲಿಪಿ ಇಲ್ಲದಿರುತ್ತಿದ್ದರೆ ಪ್ರಪಂಚದಲ್ಲಿ ಎಲ್ಲೆಲ್ಲೋ ನಡೆದ ಘಟನೆಗಳನ್ನು ಕೆಲವೇ ಗಂಟೆಗಳೊಳಗೆ ತಿಳಿಯಲು ಸಾಧ್ಯವಾಗುತ್ತಿತ್ತೆ? ಲಿಪಿ ಇಲ್ಲದಿದ್ದರೆ ಟೆಲಿಗ್ರಾಫ್ ಮುಂತಾದ್ದು ಸಾಧ್ಯವೇ?

ಆದರೆ ಲಿಪಿ ಇಲ್ಲದ ಭಾಷೆಯವರು ಕೂಡಾ ಸಂದೇಶಗಳನ್ನು ದೂರ ಪ್ರಾಂತಗಳಿಗೆ ಕಳುಹಿಸುತ್ತಾರೆ. ಆಫ್ರಿಕದಲ್ಲಿರುವ ಕೆಲವು ಜಾತಿಯವರು ಒಂದು ಕಡೆಯಲ್ಲಿ ನಡೆಯುವ ಸಂಘಟನೆಯನ್ನು ಕುರಿತು, ಕೆಲವು ನೂರು ಮೈಲು ದೂರದಲ್ಲಿರುವವರಿಗೆ ತಮಟೆಯ ಆಂಚೆಗಳಿಂದ ಟೆಲಿಗ್ರಾಫ್‌ಗಿಂತಲೂ ವೇಗವಾಗಿ ತಲಪಿಸಿಬಿಡುತ್ತಾರಂತೆ. ಹಾಗೆಯೇ ಅಮೆರಿಕನ್ ಇಂಡಿಯನ್ನರು ಹೊಗೆಯ ಮೂಲಕವಾಗಿ ದೂರ ಪ್ರಾಂತಗಳಿಗೆ ಸಂದೇಶಗಳನ್ನು ಕಳುಹಿಸುತ್ತಾರಂತೆ. ಆದರೆ ತಮಟೆಗಳ ಶಬ್ದವೂ ಹೊಗೆಯ ಸಂಕೇತವೂ ಗಾಳಿಯಲ್ಲಿ ಬೆರೆತುಹೋಗುವಂಥವು. ಲಿಖಿತ ಸಂದೇಶಗಳಂತೆ ಬಹುಕಾಲ ಉಳಿದಿರುವುದಿಲ್ಲ.




## ೮೭

### ತಪ್ಪಿಗೆ ಶಿಕ್ಷೆ

**ಒಂ**ದು ಕಾಲದಲ್ಲಿ ಸಿಂಹಳ ದ್ವೀಪವನ್ನು ಆಳಿ ಕೊಂಡಿದ್ದ ಜೀಮೂತ ವಾಹನನ ಕುಮಾರನಾದ ಕಂದರ್ಪಕೇತನು ಅತ್ಯಂತ ಚೆಲುವನಾಗಿದ್ದನು. ಒಂದು ದಿನ ಒಬ್ಬ ವರ್ತಕನು ಅವನಿಗೆ ಒಂದು ವಿಚಿತ್ರವಾದ ಸಮಾಚಾರ ಹೇಳಿದರು. ಅದೇನೆಂದರೆ ಪ್ರತಿ ಚತು ರ್ದಶಿಯ ದಿನ ಪಶ್ಚಿಮ ದಿಕ್ಕಿನ ಸಮುದ್ರದ ಮಧ್ಯದಲ್ಲಿ ಒಂದು ಕಲ್ಪವೃಕ್ಷ ಉದ್ಭವಿಸಿರುತ್ತದೆ. ಅದರ ಕೆಳಗೆ ತ್ರಿಲೋಕ ಸುಂದರಿಯೊಬ್ಬಳು ದಿವ್ಯಾಭರಣ ಭೂಷಿತೆ ಯಾಗಿ ಒಂದು ಶಯ್ಯೆಯ ಮೇಲೆ ಕುಳಿತುಕೊಂಡಿರು ತ್ತಾಳೆ. ಅದೊಂದು ಕಣ್ಣಿಗೆ ಹಬ್ಬದಂಥ ದೃಶ್ಯ.

ಅದನ್ನು ಕೇಳಿ ಕಂದರ್ಪಕೇತನು ಆಸಕ್ತಿಯನ್ನು ತಾಳಲಾರದೆ ಹೋದನು. ವರ್ತಕನು ಹೇಳಿದ ದಿನ ಆ ಸ್ಥಳಕ್ಕೆ ಹೋಗಿ ಕಲ್ಪವೃಕ್ಷದ ಕೆಳಗೆ ಶಯ್ಯೆ ಯಲ್ಲಿ ಒರಗಿಕೊಂಡಿದ್ದ ಅದ್ಭುತ ಸುಂದರಿಯನ್ನು ನೋಡಿದನು. ಅವನನ್ನು ನೋಡಿದ ಕೂಡಲೇ ಆ ಸುಂದರಿ ಸಮುದ್ರದಲ್ಲಿ ಮುಳುಗಿ ಹೋದಳು. ಕಲ್ಪವೃಕ್ಷವೂ ಶಯ್ಯೆಯೂ ಮಾಯವಾದುವು.

ಅವಳ ಸೌಂದರ್ಯದಿಂದ ಆಕರ್ಷಿತನಾದ ಕಂದರ್ಪ ಕೇತನು ಅವಳ ಹಿಂದೆಯೇ ಸಮುದ್ರಕ್ಕೆ ಹಾರಿ ತಳವನ್ನು ಸೇರಿಕೊಂಡನು. ಆ ಸಮುದ್ರ ತಳದಲ್ಲಿದ್ದ ಒಂದು ಬಂಗಾರದ ಮಹಾ ಭವನದೊಳಗೆ ವಿದ್ಯಾಧರ ಸ್ತ್ರೀಯರ ನಡುವೆ ಆ ದಿವ್ಯ ಸುಂದರಿ ಒಂದು ಬಂಗಾರದ ಶಯ್ಯೆಯ ಮೇಲೆ ಕುಳಿತಿರುವುದನ್ನು ನೋಡಿದನು.

ಆ ಸುಂದರಿ ಅವನ ಬಳಿಗೆ ಒಬ್ಬಳು ವಿದ್ಯಾಧರಿ ಯನ್ನು ಕಳುಹಿಸಿಕೊಟ್ಟಳು. ಆ ವಿದ್ಯಾಧರಿ ಅವ ನೊಂದಿಗೆ ಹೀಗೆಂದಳು :

"ಈ ಸುಂದರಿ ಕಂದರ್ಪ ಕೇಳಿ ಎಂಬ ವಿದ್ಯಾಧರ ರಾಜನ ಮಗಳು. ಇವಳ ಹೆಸರು ರತ್ನಮಂಜರಿ. ಯಾವನು ತನ್ನನ್ನು ನೋಡಿ ಪರವಶನಾಗಿ, ಸಾಹಸ ದಿಂದ ಸಮುದ್ರದಲ್ಲಿ ಹಾರಿ ಈ ಬಂಗಾರದ ಭವನಕ್ಕೆ ಬರುವನೋ ಅವನನ್ನು ಮಾತ್ರ ಮದುವೆಯಾಗುವೆ ನೆಂದು ಇವಳು ಶಪಥ ಹಾಕಿಕೊಂಡಿದ್ದಾಳೆ. ಆ ಪ್ರಕಾರ ಅವಳು ಈಗ ನಿನ್ನನ್ನು ಮದುವೆಮಾಡಿ ಕೊಳ್ಳಲು ಸಿದ್ಧಳಾಗಿದ್ದಾಳೆ. ಏನನ್ನುವಿ? "



ಆ ಮಾತು ಕೇಳಿ ಕಂದರ್ಪಕೇತನಿಗೆ ಅತ್ಯಂತ ಸಂತೋಷವಾಯಿತು. ಅವನು ರತ್ನಮಂಜರಿಯನ್ನು ಗಾಂಧರ್ವ ವಿಧಿಯಿಂದ ಮದುವೆಯಾದನು. ಇಬ್ಬರೂ ಅನ್ಯೋನ್ಯತೆಯಲ್ಲಿ ಆ ಬಂಗಾರದ ಭವನದಲ್ಲಿ ಸುಖ ವಾಗಿದ್ದರು.

ಆ ಭವನದ ಬಿಡು ಚಾವಡಿಯಲ್ಲಿ ರತ್ನಮಂಜರಿ ಯದು ಬಂಗಾರದ ಪ್ರತಿಮೆಯೊಂದಿತ್ತು. "ಆ ಪ್ರತಿಮೆಯನ್ನು ಮಾತ್ರ ಎಂದಿಗೂ ಮುಟ್ಟಗೂಡದು. ಮುಟ್ಟಿದರೆ ನಿನಗೆ ಸರ್ವನಾಶನ ಉಂಟಾಗುತ್ತದೆ." ಎಂದು ರತ್ನಮಂಜರಿ ಕಂದರ್ಪ ಕೇತನಿಗೆ ಎಚ್ಚರಿಕೆ ಹೇಳಿದಳು.

ಆದರೂ ಒಂದು ದಿನ ರತ್ನಮಂಜರಿ ಸಮೀಪ ವಿಲ್ಲದಿದ್ದಾಗ, ಕಂದರ್ಪಕೇತನು ಆ ಪ್ರತಿಮೆಯನ್ನು ಮುಟ್ಟಿಬಿಟ್ಟನು. ಕೂಡಲೇ ಅದು ಅವನನ್ನು ಬಲ ವಾಗಿ ಒದೆಯಿತು. ಆ ಒದೆಯಿಂದ ಹಾರಿದವನು ಸಿಂಹಳ ದ್ವೀಪದಲ್ಲಿ ಹೋಗಿ ಬಿದ್ದನು.

## ಮಾರಣಹೋಮ

ಶ್ರೀ ಪರ್ವತ ಪ್ರಾಂತದಲ್ಲಿರುವ ಬ್ರಹ್ಮಪುರ ವೆಂಬಲ್ಲಿ ಒಂದು ಸಮಾಚಾರ ಬಹುವೇಗವಾಗಿ ಹರಡಿತು. ಅದೇನೆಂದರೆ ಗುಡ್ಡದ ಶಿಖರದಲ್ಲಿ ಘಂಟಾಕರ್ಣನೆಂಬ ರಾಕ್ಷಸನಿದ್ದಾನೆಂಬುದೇ!

ಈ ವದಂತಿಯಿಂದಾಗಿ ಊರ ಜನರು ಗುಡ್ಡದ ಮೇಲೆ ಹೋಗಿ ಸೌದೆಗಳನ್ನು ತರಲು ಭಯಪಟ್ಟು ಉರುವಲಿಗಿಲ್ಲದೆ ಕಷ್ಟಪಡ ತೊಡಗಿದರು.

ಆದರೆ ನಿಜ ಸಂಗತಿ ಏನೆಂದರೆ, ಒಂದು ಗಂಟೆ ಯನ್ನು ಕದ್ದುಕೊಂಡು ಈ ಗುಡ್ಡದ ಮೇಲೆ ಓಡುತ್ತಿದ್ದ ಒಬ್ಬ ಕಳ್ಳನನ್ನು ಹುಲಿ ಹಿಡಿದು ಕೊಂದು ಹಾಕಿತ್ತು. ಅವನ ಕೈಯ್ಯಲ್ಲಿದ್ದ ಗಂಟೆ ಕೆಲವು ಕೋತಿ ಗಳಿಗೆ ಸಿಕ್ಕಿತು. ಕೋತಿಗಳು ಆ ಗಂಟೆಯನ್ನು ಆಗಾಗ ಮೊಳಗಿಸಿಕೊಂಡು ಓಡಾಡುತ್ತಿದ್ದುವು. ಆದು ದರಿಂದ ಬ್ರಹ್ಮಪುರಿಯ ನಿವಾಸಿಗಳಿಗೆ ಗಂಟೆಯ ಧ್ವನಿ ಆ ಗುಡ್ಡದ ಕಡೆಯಿಂದ ಯಾವಾಗೆಂದ ರಾವಾಗ, ಎಲ್ಲೆಂದರಲ್ಲಿಂದ ಕೇಳಿಬರುತ್ತಿತ್ತು. ಅದನ್ನು ಮೊಳಗಿಸುವವನು ಘಂಟಾಕರ್ಣನೆಂಬ ರಾಕ್ಷಸನೆಂದು ಯಾವನೋ ಹೇಳಿದನು. ಆದನ್ನು ಕೇಳಿ ಅನೇಕ ಮಂದಿ ಊರುಬಿಟ್ಟು ಓಡಿಹೋದರು. ಏಕೆಂದರೆ, ಆ ರಾಕ್ಷಸನು ನರಭಕ್ಷಕನೆಂದೂ, ಮನುಷ್ಯರನ್ನು ತಿಂದು ಮುಗಿಸಿದಾಗೆಲ್ಲಾ ಗಂಟೆ ಬಾರಿಸುವನೆಂದೂ ಮತ್ತೆ ಯಾವನೋ ಪುಕಾರು ಎಬ್ಬಿಸಿದ್ದನು.

ಕಡೆಗೆ ರಾಜನು ಗುಡ್ಡದ ಮೇಲಿನ ಘಂಟಾ ಕರ್ಣನನ್ನು ಮಾರಣ ಹೋಮಮಾಡಿಸಿದವರಿಗೆ ಸಾವಿರ ಬಂಗಾರದ ನಾಣ್ಯ ಕೊಡುವೆನೆಂದು ಡಂಗುರ ಸಾರಿಸಿದನು.

ಆ ಗಂಟೆಯ ರಹಸ್ಯವು ಒಬ್ಬಳು ನರ್ತಕಿಗೆ ಗೊತ್ತಿತ್ತು. ಅವಳು ತನಗೆ ಬೇಕಾದವರನ್ನು ರಹಸ್ಯ ವಾಗಿ ಸಂಧಿಸಲು ನಿರ್ಜನವಾದ ಆ ಗುಡ್ಡದ ಕಡೆಗೆ ಹೋಗುತ್ತಿದ್ದಳು. ಅಂತಹ ಸಮಯದಲ್ಲಿ ಅವಳು

ಗಂಟೆ ಬಾರಿಸುವ ಕೋತಿಗಳನ್ನು ನೋಡಿದಳು. ತನ್ನ ರಹಸ್ಯ ಕಾಪಾಡಲು ಗಂಟೆಯ ವದಂತಿಯನ್ನು ಹಾಗೆ ಇರಗೊಡಿಸುವುದೇ ಅವಳಿಗೆ ಬೇಕಾಗಿತ್ತು.

ಆದರೆ ರಾಜನು ಸಾರಿಸಿದ ಡಂಗುರವನ್ನು ಕೇಳಿದ ಮೇಲೆ, ಅವಳು ರಾಜನ ಬಳಿಗೆ ಹೋಗಿ ತಾನು ಆ ರಾಕ್ಷಸನನ್ನು ಮಾರಣ ಹೋಮಮಾಡಿ ನಾಶ ಪಡಿಸುವೆನೆಂದು ಹೇಳಿದಳು. ಅದಕ್ಕೆ ಬೇಕಾದ ಪೂಜಾ ದ್ರವ್ಯಗಳನ್ನು ತೆಗೆದುಕೊಂಡು, ರಂಗವಲ್ಲಿ ಹಾಕಿ, ಗಣೇಶ ಪೂಜೆಮಾಡಿ, ತಾಂತ್ರಿಕ ಕ್ರಿಯೆಗಳನ್ನು ನಡೆಸಿದಳು. ಅದಾದ ಮೇಲೆ ಒಂದು ಬುಟ್ಟಿಯಲ್ಲಿ ಕೋತಿಗಳಿಗೆ ಪ್ರಿಯವಾದ ಹಣ್ಣು ಕಾಯಿಗಳನ್ನು ಬುಟ್ಟಿ ತುಂಬಾ ತೆಗೆದುಕೊಂಡು ಹೋಗಿ, ಆ ಹಣ್ಣು ಕಾಯಿಗಳನ್ನು ಕೋತಿಗಳ ಕಡೆಗೆ ಬಿಸುಟಳು. ಕೋತಿಗಳು ಗಂಟೆಯನ್ನು ಬಿಟ್ಟು ಅವುಗಳಿಗಾಗಿ ಓಡಿದುವು. ಅವಳು ಮೆಲ್ಲಗೆ ಗಂಟೆಯನ್ನು ಸಂಗ್ರಹಿಸಿ ಕೊಂಡು, ರಾಜನ ಬಳಿಗೆ ಹೋಗಿ, "ಇನ್ನು ಘಂಟಾ ಕರ್ಣ ರಾಕ್ಷಸನಿಲ್ಲ. ಅವನನ್ನು ಮಾರಣ ಹೋಮದಲ್ಲಿ ಹೋಮಿಸಿ ಬಿಟ್ಟೆ. ಅವನ ಗಂಟೆ ತಂದಿದ್ದೇನೆ. ಇನ್ನು ಮೇಲೆ ಯಾರಿಗೂ ಗಂಟೆಯ ಶಬ್ದ ಕೇಳಿಸ ಲಾರದು" ಎಂದಳು.

ಮತ್ತೆ ಗುಡ್ಡದ ಮೇಲಿನಿಂದ ಗಂಟೆಯ ಶಬ್ದ ಹೇಗೆ ಕೇಳೀತು? ರಾಜನು ಅವಳಿಗೆ ಸಾವಿರ ಬಂಗಾರದ ನಾಣ್ಯಗಳನ್ನು ಕೊಟ್ಟನು.

## ಅಲಂಕಾರದ ನೋಜು

ಒಂದು ದೇಶದಲ್ಲಿ ಉಜ್ವಲಕನೆಂಬ ರಥಸಾರಥಿ ಇದ್ದನು. ಅವನದೇ ಸ್ವಂತ ರಥವೂ ಇದ್ದಿತು. ಆದರೆ ಅವನ ರಥಕ್ಕೆ ಎಂದೂ ಗಿರಾಕಿಗಳು ಸಿಗುತ್ತಿರಲಿಲ್ಲ. ಆದುದರಿಂದ ರಥ ಹೊಡೆಯುವ ವೃತ್ತಿ ಅವನಿಗೆ ಕೂಡಿ ಬರಲಿಲ್ಲ.

"ಹೊಟ್ಟೆ ತುಂಬಿಸಲಾಗದ ವೃತ್ತಿಯನ್ನೂ, ದಿನ ದೂಡಲು ಕಷ್ಟವಾದ ದೇಶವನ್ನೂ, ನಂಬಿಕೊಂಡಿರು ವುದರಲ್ಲಿ ಅರ್ಥವಿಲ್ಲ. ಪ್ರಪಂಚವೆಲ್ಲವೂ ನಮ್ಮ ಮಾತೃಭೂಮಿಯೇ ಎಂದು ತಿಳಿದರಾಯಿತು. ದಿನ ದೂಡಲು ಯಾವ ವೃತ್ತಿಯನ್ನಾದರೂ ಅವಲಂಬಿಸ



ಬಹುದು." ಎಂದುಕೊಂಡು ಅವನು ಇದ್ದ ದೇಶ ದಿಂದ ಇನ್ನೊಂದು ದೇಶಕ್ಕೆ ಹೋಗಲು ಹೊರಟನು.

ದಾರಿಯಲ್ಲಿ ಒಂದು ಅರಣ್ಯಪ್ರಾಂತ ಬಂದಿತು. ಅಲ್ಲಿ ಅವನಿಗೆ ಒಂದು ಒಂಟೆಯ ಮರಿ ಸಿಕ್ಕಿತು. ತಾಯಿ ಒಂಟೆ ಅದನ್ನು ಅನಾಥವಾಗಿ ಬಿಟ್ಟು ಎತ್ತ ಹೋಯಿತೋ, ಏನಾಯಿತೋ ದೇವರಿಗೇ ಗೊತ್ತು ಪಾಪ!

ಅವನು ಆ ಒಂಟೆಯ ಮರಿಯನ್ನು ತೆಗೆದು ಕೊಂಡು ಹಿಂದಿರುಗಿ ಮನೆಗೆ ಬಂದು. ಕಾಡಿನಿಂದ ಹುಲ್ಲು ಹರಿದು ತಂದು ಹಾಕಿ ಅದನ್ನು ಮೇಯಿಸಿ ದನು. ಅದು ಚೆನ್ನಾಗಿ ಬಲಿತು ದೊಡ್ಡದಾಗಿ ಅನೇಕ ಮರಿಗಳನ್ನು ಈನಿತು. ಹೀಗೆ ಅವನ ಹತ್ತಿರ ಅನೇಕ ಒಂಟೆಗಳಾಗಲು, ಅವುಗಳನ್ನು ಬಾಡಿಗೆಗೆ ಕೊಟ್ಟು ಹೊಟ್ಟೆ ತುಂಬಿಸಿಕೊಳ್ಳ ತೊಡಗಿದನು.

ಅವನು ಆಗಾಗ ಮರುಭೂಮಿಯ ಮೇಲಿಂದಾಗಿ ರಾಜಾಸ್ಥಾನಕ್ಕೂ, ಗುಜರಾತಿಗೂ ಪ್ರಯಾಣ ಮಾಡುತ್ತ, ಆಗಾಗ ಚಿಕ್ಕ ಒಂಟೆಗಳನ್ನು ಕೊಂಡು ಕೊಂಡು ತನ್ನ ಮಂದೆಯಲ್ಲಿ ಸೇರಿಸಿಕೊಳ್ಳುವನು.

ಹೀಗೆ ಬಂದ ಅವನ ಒಂಟೆಯ ಮರಿಗಳಲ್ಲಿ ಒಂದು ತುಂಬಾ ಚಂದವಾಗಿತ್ತು. ಆದುದರಿಂದ ಅವನು ಅದರ ಕೊರಳಿಗೆ ಬೆಳ್ಳಿಯಿಂದ ಮಾಡಲ್ಪಟ್ಟ ಮಣಿಸರವನ್ನು ಅಲಂಕರಿಸಿದನು. ಅದು ನಡೆಯು ವಾಗ ಮಣಿಸರದಿಂದ ಹೊರಡುವ ಶಬ್ದವು ಯಾರ ಕಿವಿಗಾದರೂ ತುಂಬಾ ಇಂಪಾಗಿತ್ತು. ಆ ಕಾರಣದಿಂದ ಆ ಕಿರಿಯ ಒಂಟೆಗೂ ತುಂಬ ಹೆಮ್ಮೆಯಾಗಿತ್ತು. ಮಣಿಸರದ ಅಲಂಕಾರವೇನಿಲ್ಲದ ಬೋಳು ಕೊರಳಿನ ಇತರ ಒಂಟೆಗಳಿಗೆ ಹೊಟ್ಟೆಗಿಚ್ಚು ಉಂಟಾಗಿತ್ತು.

ಒಂದು ದಿನ ಒಂಟೆಗಳ ಮಂದೆ ಕಾಡಿನಲ್ಲಿ ಮೇಯಲು ಹೋದಾಗ, ಮಣಿಸರದ ಅಲಂಕಾರದ ಒಂಟೆ ಹಿಂದುಳಿದು ಹೋಯಿತು. ಉತ್ಸಾಹದಿಂದ ಕುಣಿಯುತ್ತ ಆಡುತ್ತಾ ಹೋಗುವ ಒಂಟೆಯ ಮರಿ ತಾನು ಒಬ್ಬಂಟಿಗನಾದುದನ್ನು ಗಮನಿಸಲಿಲ್ಲ.

ಒಂದು ಮುದಿ ಒಂಟೆ ಅದನ್ನು ನೋಡಿ, "ಒಂಟಿ ಯಾಗಿ ಹಿಂದೆ ಉಳಿದೆಯಲ್ಲೋ ಒಂಟೆ ಮಗನೇ! ಕ್ರೂರಮೃಗಗಳ ಬಾಯಿಗೆ ಬಿದ್ದೀಯೇ! ಜಾಗ್ರತೇ! ನಿನ್ನ ಮಣಿಸರದ ಶಬ್ದ ಅವುಗಳನ್ನು ಆಕರ್ಷಣೆ ಮಾಡಬಹುದು" ಎಂದು ಎಚ್ಚರಿಸಿತು.

ಮುದಿ ಒಂಟೆಯ ಮಾತನ್ನು ಆ ಹುಡುಗು ಒಂಟೆ ಲಕ್ಷ್ಯ ಮಾಡಲಿಲ್ಲ. ಒಂಟೆಗಳ ಮಂದೆ ಕಣ್ಣಿಗೆ ಕಾಣದಷ್ಟು ದೂರ ಹೋಯಿತು. ಕತ್ತಲೆ ಯಾಯಿತು. ಮಣಿಸರದ ಒಂಟೆ ಅತ್ತ ಇತ್ತ ಓಡಾಡಿ ಕೊಂಡೇ ಇತ್ತು. ಆದರೆ ಮಣಿಸರಗಳ ಶಬ್ದ ದಿಂದ ಅಲ್ಲಿಗೆ ಬಂದ ಒಂದು ಸಿಂಹವು ಅದನ್ನು ಹಿಡಿದು ತನ್ನ ಹೊಟ್ಟೆಗೆ ಸೇರಿಸಿಕೊಂಡಿತು.






೪

[ ಕುಂಡಲಿನೀ ರಾಜ್ಯದ ಸೈನಿಕರು ಧನಾಗಾರವನ್ನು ತುಂಬಿಸಲು ಬೇರೆ ದ್ವೀಪರಾಜ್ಯಗಳ ಮೇಲೆ ದಾಳಿ ಹೊರಟರು. ಸೇನಾಧಿಪತಿ ಸಮರ ಸೇನನು ಧೂಮಕೇತುವಿನ ದುಃಶಕುನವನ್ನೂ ಲಕ್ಷ್ಯ ಮಾಡದೆ, ತುಫಾನಿಗೆ ಸಿಕ್ಕಿ ನಷ್ಟ ಪಟ್ಟು ಆರು ಮಂದಿ ಸೈನಿಕರೊಂದಿಗೆ ಒಂದು ದ್ವೀಪವನ್ನು ಸೇರಿದನು. ಅಲ್ಲಿಯ ಮಾಂತ್ರಿಕ ಮಾನವ ಮೃಗ ಪಕ್ಷಿಗಳಿಗೆ ಹೆದರಿ ಅವರೆಲ್ಲ ಓಡ ತೊಡಗಿದರು ]

ಮಹಾಧೀರನೆನಿಸಿಕೊಂಡ ಸೇನಾಧಿಪತಿ ಸಮರ ಸೇನನೂ, ಸೈನಿಕರೂ ಮಹಾಭೀತಿಯಿಂದ ದಿಕ್ಕು ದೆಸೆ ತಿಳಿಯದೆ ಆ ಅರಣ್ಯದಲ್ಲಿ ಓಡುತ್ತ ಸ್ವಲ್ಪ ದೂರ ಹೋಗಲು ಒಂದು ಗುಡ್ಡವು ಅವರಿಗೆ ಇದಿರಾಯಿತು. ಅಲ್ಲಿ ನಿಂತು ಸುತ್ತಲೂ ಒಮ್ಮೆ ನೋಡಿದರು.

ಭಯಂಕರ ರೂಪದ ಏಕಾಕ್ಷಿ ಮಾಂತ್ರಿಕನ ಕಂಠ ಸ್ವರವು ಈಗ ಅವರ ಕಿವಿಗೆ ಕೇಳಿಸುತ್ತಿರಲಿಲ್ಲ. ತಾತ್ಕಾಲಿಕವಾದ ಪ್ರಾಣಾಪಾಯದಿಂದ ತಪ್ಪಿದ ಸಂತೋಷವಾದರೂ, ಮುಂದೇನು ಬರುವುದೋ ಎಂಬ ಭಯ ಹಾಗೇ ಇದ್ದಿತು. ತಮ್ಮ ಬೆನ್ನು ಹತ್ತಿದ ಚತುರ್ನೇತ್ರನ ಗೂಢಚಾರಿ ಯಾದ ಕರಿಗೂಗೆಯೂ, ನರವಾನರವೂ ಎಲ್ಲಿ ಹೋದುವೋ ಏನಾದುವೋ ತಿಳಿಯಲಿಲ್ಲ. ಒಟ್ಟಿನ ಮೇಲೆ ಈ ಸ್ಥಳವು ಸ್ವಲ್ಪ ಮಟ್ಟಿಗೆ ಸ್ಥಿಮಿತವನ್ನು ಕೊಡುವ ಹಾಗೆ ತೋರಿತು.

ಆದರೆ ಹೊತ್ತನ್ನು ವ್ಯರ್ಥವಾಗಿ ಕಳೆಯು ವಂತಿಲ್ಲ. ಮುಂದೆ ಮಾಡಬೇಕಾದುದೇನು ? ಹೋಗಬೇಕಾದುದೆಲ್ಲಿಗೆ ? ಈ ಪ್ರಶ್ನೆಗಳು ಅವರ ಮುಂದೆ ಕುಣಿದಾಡುತ್ತಿದ್ದುವು. ಮತ್ತೆ ಏನೋ



ಒಂದು ಅಪಾಯವು ಕಾಣಿಸುವುದರೊಳಗೇ ಈ ಮಾಂತ್ರಿಕ ದ್ವೀಪದಿಂದ ಹೊರಬಿದ್ದು ಬಿಡಬೇಕು. ದ್ವೀಪವನ್ನು ಬಿಟ್ಟುಹೋಗುವುದೆಂದರೆ ಹೇಗೆ ? ತಾವು ಸಮುದ್ರದಲ್ಲಿ ಬಿಟ್ಟಿರುವ ಹಡಗುಗಳು, ದೋಣಿಗಳು ಯಾವ ದಿಕ್ಕಿನಲ್ಲಿವೆ ? ಇಲ್ಲಿ ತಮಗೆ ಏನೇನೋ ಅಪಾಯಗಳು ಇದಿರಾದ ಹಾಗೆ ಹಡಗುಗಳಲ್ಲಿ ಬಿಟ್ಟು ಬಂದ ಸೈನಿಕರಿಗೆ ಎಂತಹ ಅಪಾಯವೂ ಬಂದಿರಲಾರದಷ್ಟೆ ? ಅವರೆಲ್ಲ ಇದ್ದಲ್ಲೇ ಇರುವರಷ್ಟೆ? ಅಸಲು ತಾವು ನಿಲ್ಲಿಸಿಟ್ಟ ಹಡಗುಗಳ ಜಾಗದಿಂದ ಎಷ್ಟು ದೂರದಲ್ಲಿದ್ದೇವೋ ಏನೋ ! ಯಾವ ದಿಕ್ಕಿನಲ್ಲಿದ್ದೇವೋ ?

ದಿಕ್ಕು ತಿಳಿಯಬೇಕೆಂದು ಸಮರಸೇನನು ಅರಣ್ಯವನ್ನೂ ಆಕಾಶವನ್ನೂ ತಲೆ ತಿರುಗಿಸಿ ನೋಡಿದನು. ಎತ್ತ ತಿರುಗಿದರೂ ಚಿಕ್ಕವೂ ದೊಡ್ಡವೂ ಆದ ಗುಡ್ಡಗಳು ; ಆಕಾಶವನ್ನು ಮುದ್ದಿಸುವ ವೃಕ್ಷಗಳು ; ಆ ವೃಕ್ಷಗಳನ್ನು ಸುತ್ತಿಕೊಂಡಿರುವ ಬಳ್ಳಿಗಳು. ಇವುಗಳ ನಡುವೆ ದಿಕ್ಕು ತಿಳಿದುಕೊಳ್ಳುವುದರೊಳಗೆ ಅವನ ತಲೆಯೇ ತಿರುಗತೊಡಗಿತು.

ಸಮರಸೇನನ ತಲೆಯೊಳಗೆ ಚಿಟ್ಟು ಹಿಡಿದಂತಾಗಲು, ಆಕಾಶದ ಒಂದು ಕಡೆಯಲ್ಲಿ ಏನೋ ಪ್ರಕಾಶವು ಹೊರಡುವುದು ಕಂಡಿತು. ನೋಡುತ್ತಿದ್ದಂತೆ ಆಕಾಶದಲ್ಲಿ ಮುಚ್ಚಿ ಹಾಕಿದ್ದ ಮಬ್ಬುಗಳು ತೊಲಗಿ ಸೂರ್ಯನು ಕಾಣಿಸಿದನು. ಆ ಕೂಡಲೇ ಸಮರಸೇನನ ತಲೆ ತಿನ್ನುತ್ತಿದ್ದ ದಿಕ್ಕಿನ ಸಮಸ್ಯೆ ತೊಲಗಿತು.

"ಈ ಮಂತ್ರಗಳ ದ್ವೀಪದ ಪಶ್ಚಿಮ ಭಾಗದಲ್ಲಿ ಈಗ ನಾವಿದ್ದೇವೆ. ಹಾಗಾದರೆ ನಾವು ಹಡಗುಗಳನ್ನೂ ದೋಣಿಗಳನ್ನೂ ಬಿಟ್ಟದ್ದು ಈ ದ್ವೀಪದ ಮೂಡು ಬದಿಯ ಸಮುದ್ರ ತೀರದಲ್ಲಿ. ಆದರೆ ಆ ಮೂಡು ಬದಿಯ ತೀರವು ಎಷ್ಟು ದೂರವೋ ? ತಾವು ಎತ್ತೆತ್ತ ತಿರುಗಿ ಹೇಗೆಹೇಗೆ ಓಡಿದೆವೋ ?

"ಹಾಗಾದರೆ ನಾವೀಗ ಮೂಡು ತೀರಕ್ಕೆ ಹೋಗಬೇಕಷ್ಟೆ ? ಆದಷ್ಟು ಬೇಗ ಹೊರಡುವುದು ಒಳ್ಳೇದಲ್ಲವೆ ?" ಎಂದನೊಬ್ಬ ಸೈನಿಕ.

"ಒಳ್ಳೆಯದೇನೋ ಹೌದು. ಆದರೆ ಅಲ್ಲಿಗೆ ಹೋಗಿ ಸೇರುವುದು ಅಷ್ಟೇನೂ ಸುಲಭವಲ್ಲ. ದಾರಿಯಲ್ಲಿ ಏನೇನು ಅಪಾಯಗಳನ್ನು ಇದಿರಿಸಬೇಕಾಗುತ್ತದೋ ? ಮೂಗಿಗೆ ನೇರಾಗಿ ಹೋಗೋಣವೆಂದರೆ ಅಡ್ಡಡ್ಡವಾಗಿ ದೊಡ್ಡದೊಡ್ಡ ಗುಡ್ಡಗಳಿವೆ. ನಾವು ಎಲ್ಲೆಲ್ಲೋ ಬಳಸಿ ಬಳಸಿ ಇಲ್ಲಿಗೆ ಬಂದಿದ್ದೇವೆ. ಅದರ ಮೇಲೆ ಭಯಂಕರವಾದ ಮೃಗ ಪಕ್ಷಿಗಳಿವೆ. ಅವುಗಳಿಂದ ತಪ್ಪಿಸಿಕೊಂಡು ಮೂಡು ತೀರವನ್ನು ಮುಟ್ಟಿದರೆ ನಾವು ಬದುಕಿದೆವೆನ್ನಬಹುದು !" ಎಂದು ಸಮರಸೇನನು ದೊಡ್ಡದಾಗಿ ಒಂದು ನಿಟ್ಟುಸಿರುಬಿಡುತ್ತ "ದೇವೀ! ನಿನ್ನ ದಯೆ !" ಎಂದನು.

ನಾಯಕನಾದ ಸಮರಸೇನನೇ ಇಷ್ಟೊಂದು ನಿರಾಶೆಯಿಂದ ಮಾತಾಡಿದ ಮೇಲೆ ಸೈನಿಕರೂ ಒಣಗಿದ ಅರಳಿಯೆಲೆಯಂತೆ ಗದಗದಿಸಿ ಹೋದರು. ಅದನ್ನು ಗಮನಿಸಿ ಸಮರಸೇನನು ಕೂಡಲೇ, "ಧೈರ್ಯಂ ಸರ್ವತ್ರ ಸಾಧನಂ! ನಾವು ಪೂರ್ವ ತೀರಕ್ಕೆ ಹೋಗಬೇಕಾದ್ದಂತೂ ನಿಜ. ಹೊರಡೋಣ. ಇದಿರಾಗುವ ಕಷ್ಟಗಳನ್ನು ಇದಿರಿಸೋಣ. ನಮ್ಮ ಕೈಯಲ್ಲಿ ಖಡ್ಗವೂ, ಕುಂಡಲಿನೀದೇವಿಯ ಕೃಪೆಯೂ ಇರುವವರೆಗೆ ನಮಗೆ ಯಾವ ಕಷ್ಟಗಳು ಇದಿರಾದರೂ ಸುರಕ್ಷಿತವಾಗಿ ಪಾರಾಗುತ್ತೇವೆ. ಇಷ್ಟರವರೆಗೆ ಪಾರಾದೆವಲ್ಲಾ? ನಡೆಯಿರಿ! ನನ್ನ ಹಿಂದೆಯೇ ಬನ್ನಿರಿ!" ಎಂದು ಸೈನಿಕರನ್ನು ಪ್ರೋತ್ಸಾಹಗೊಳಿಸಿ ತಾನು ಮುಂದೆ ನಡೆದನು.

ಸ್ವಲ್ಪದೂರ ನಡೆದು ಸಮರಸೇನನು ತಟಕ್ಕನೆ ನಿಂತು, "ಉಷ್! ನಿಲ್ಲಿರಿ!" ಎಂದು ಸೈನಿಕರಿಗೆ ಸನ್ನೆಮಾಡಿದನು. ಅವರ ಇದಿರಿನಲ್ಲಿ ಒಂದು ಭಯಂಕರ ದೃಶ್ಯವು ಪ್ರತ್ಯಕ್ಷವಾಗಿತ್ತು. ಅದು ಎಂತಹ ಧೀರನ ಧೈರ್ಯವನ್ನಾದರೂ ನೀರು ಮಾಡುವಂತಹ ದೃಶ್ಯ!

ದೊಡ್ಡದೊಂದು ಮರದ ಬೊಡ್ಡೆಯಂತಹ ಹೆಬ್ಬಾವು ಬ್ರಹ್ಮಾಂಡವಾದೊಂದು ಮರದಕೊಂಬೆಯಿಂದ ಮೆಲ್ಲಮೆಲ್ಲನೆ ಕೆಳಗೆ ಜಾರುತ್ತಿತ್ತು. ಕೆಳಗೆ ಎರಡು ಚಿರತೆಗಳು ಆ ಹೆಬ್ಬಾವನ್ನು ನೋಡದೆ ಸುಮ್ಮನೆ ಎತ್ತಲೋ ನೋಡುತ್ತ ನಿಂತಿದ್ದುವು.

ಸುಮರಸೇನನೂ ಸೈನಿಕರೂ ನೋಡುತ್ತಿದ್ದಂತೆ, ಆ ಹೆಬ್ಬಾವು ದಢೀರೆಂದು ಒಂದು ಚಿರತೆಯ ಮೇಲೆ ಬಿದ್ದು ಬಾಯಿಯಿಂದ ಅದರ ತಲೆಯನ್ನು ಹಿಡಿದುಕೊಂಡಿತು. ಮಿಂಚಿನ ವೇಗದಲ್ಲಿ ಚಿರತೆಯ ಶರೀರವನ್ನು ಹಗ್ಗದಿಂದ ಬಿಗಿದ ಹಾಗೆ ಸುತ್ತಿ ಹಿಡಿಯಿತು. ಇದನ್ನು ನೋಡಿ ಎರಡನೇ ಚಿರತೆ ಎತ್ತಲೋ ಓಡಿಹೋಯಿತು.





ಆ ಎರಡನೇ ಚಿರತೆ ಬಹುದೂರ ಓಡಿ ಬಿಡಲಿಲ್ಲ. ಅದು ಮತ್ತೆ ಕೆಲವು ಕ್ಷಣಗಳಲ್ಲಿ ಅಲ್ಲಿಗೇ ಬಂದು, ತನ್ನ ಜತೆಯ ಚಿರತೆಯನ್ನು ಹೆಬ್ಬಾವಿನ ಹಿಡಿತದಿಂದ ಬಿಡಿಸಲು ಹೆಣಗಾಡತೊಡಗಿತು. ಅದು ಹೆಬ್ಬಾವಿನೊಂದಿಗೆ ಪಂಜಾಗಳಿಂದ ಹೊಡೆಯುತ್ತಲೂ, ಪರಚುತ್ತಲೂ, ತಿವಿಯುತ್ತಲೂ ಕೋರೆಹಲ್ಲುಗಳಿಂದ ಕಚ್ಚುತ್ತಲೂ, ಮಧ್ಯೆ ಮಧ್ಯೆ ಗರ್ಜಿಸುತ್ತಲೂ ಭಯಂಕರವಾಗಿ ಹೋರಾಡುತ್ತಿತ್ತು.

ಸಮರಸೇನನು ಸೈನಿಕರೊಂದಿಗೆ, "ನೋಡಿದಿರಾ, ಇವುಗಳ ಹೋರಾಟದ ರಭಸವನ್ನು ! ನಾವು ತುಂಬಾ ಜಾಗರೂಕತೆಯಲ್ಲಿ ಚಲಿಸಬೇಕು. ಇಂತಹ ಆಪತ್ತುಗಳು ಇನ್ನೆಷ್ಟು ಇದಿರಾಗುವವೋ ! ಹೆಜ್ಜೆ ಹೆಜ್ಜೆಗೂ ಎಚ್ಚರವಿರಲಿ !" ಎಂದನು.

ಆಮೇಲೆ ಸೈನಿಕರನ್ನು ಕರೆದುಕೊಂಡು ಸಮರಸೇನನು ಬಳಸು ದಾರಿಯನ್ನು ಹಿಡಿದು ಸಾಗತೊಡಗಿದನು. ಈ ದಾರಿ ನಡೆಯಲು ಅನುಕೂಲವಾಗಿರಲಿಲ್ಲ. ಗುಡ್ಡಗಳ ಕಡೆಯಿಂದ ಬರುವ ಯಾವುದೋ ತೋಡು ತೊರೆಗಳ ನೀರು ಅಲ್ಲೆಲ್ಲಾ ಹರಡಾಡಿ ಕೆಸರುರಾಡಿಯ ನೆಲವಾಗಿತ್ತು. ಅಲ್ಲಲ್ಲಿ ಮೊಣಕಾಲು ಮಟ್ಟದಿಂದ ಸೊಂಟ ಮಟ್ಟದವರೆಗೂ ಬೆಳೆದ ಜೊಂಡು ಹುಲ್ಲು, ಪಾಚಿ, ನೀರು ಗಿಡಬಳ್ಳಿಗಳು ದಟ್ಟವಾಗಿ ಬೆಳೆದಿದ್ದುವು. ಅವುಗಳ ನಡುವಿನಲ್ಲಿ ಕಾಲುಗಳನ್ನು ಹೊಗಿಸಿ ಹೊಗಿಸಿ ನಡೆಯಬೇಕಾಗಿತ್ತು. ಅಲ್ಲಲ್ಲಿ ಬಿದಿರು ಪೊದೆಗಳೂ, ಮುಳ್ಳು ಪೊದೆಗಳೂ ಇದ್ದುವು. ಇಂತಹ ಉಪದ್ರದ ದಾರಿಯಲ್ಲಿ ಸೈನಿಕರು ಸುತ್ತಲೂ ನೋಡುತ್ತ, ಪ್ರಾಣಗಳನ್ನು ಅಂಗೈಯಲ್ಲಿಟ್ಟುಕೊಂಡು ಮುಂದೆ ಮುಂದೆ ಹೋಗುತ್ತಿದ್ದರು. ಮುಂದಿನಿಂದ ಸೇನಾನೀ ಸಮರಸೇನನೇ ನಡೆಯುತ್ತಿದ್ದನು. ಆಗಾಗ ಸೈನಿಕರಿಗೂ ಧೈರ್ಯ ಹೇಳುತ್ತಿದ್ದನು.

ಈ ರೀತಿಯಾಗಿ ಸ್ವಲ್ಪ ದೂರ ಸಾಗಿದ ಮೇಲೆ ಸಮರಸೇನನು ತುಸುನಿಂತು. "ಮುಂದಿನ ದಾರಿ ಪೂರ್ತಿ ಜಲಮಯವಾಗಿ ಕಾಣುತ್ತದೆ. ಅಲ್ಲಲ್ಲಿ ಹೊಂಡ ಗುಂಡಿ ಮಡುಗಳಿದ್ದರೂ ಇರಬಹುದು, ಜಲ ಜಂತುಗಳೂ ಇರಬಹುದು. ಆದರೂ ಕಾಡು ಮೃಗಗಳಿಗೆ ಭಯಪಟ್ಟ ಹಾಗೆ ಜಲಜಂತುಗಳಿಗೆ ಭಯಪಡಬೇಕಾಗಿಲ್ಲ. ಅವು ಸ್ವಾಭಾವಿಕವಾಗಿಯೇ ನಮ್ಮ ಪಾದಗಳ ಸುಳಿವು ತಿಳಿದು ದೂರ ಹೋಗುತ್ತವೆ." ಎಂದನು.

ಸಮರಸೇನನ ಮಾತು ಮುಗಿಯುವಷ್ಟರಲ್ಲೇ ಮುಂದೆ ತುಸುದೂರದಲ್ಲಿದ್ದ ನೀರುಹುಲ್ಲು ಪೊದರುಗಳು ಅಲುಗಾಡ ತೊಡಗಿ, ಅವುಗಳೆಡೆಯಿಂದ ಒಂದು ಖಡ್ಗಮೃಗವು ಪೂರ್ತಿ ಹೊರಬಂದಿತು. ಅದನ್ನು ನೋಡಿ ಸೈನಿಕರು ಯಾವ ಕಡೆಗೆ ಓಡಬೇಕೆಂದು ಗೊತ್ತಾಗದೆ ಅತ್ತಿತ್ತ ನೋಡತೊಡಗಿದರು. ಅವರ ಮನೋ ಭಾವವನ್ನು ಗ್ರಹಿಸಿದ ಸಮರಸೇನನು

ಅವರನ್ನು ಕುರಿತು, "ನಾವು ಓಡಿಹೋಗುವ ಪ್ರಯತ್ನ ಮಾಡಲೇ ಬಾರದು. ಅದು ಇನ್ನಷ್ಟು ಆಪತ್ತು! ಈಗ ಧೈರ್ಯವೇ ಶರಣು! ಎಲ್ಲರೂ ಒಬ್ಬರ ಹಿಂದೊಬ್ಬರು ಸಾಲಾಗಿ ನಿಲ್ಲಿರಿ. ಕೈಯಲ್ಲಿ ಕತ್ತಿಗಳು ಸಿದ್ಧವಾಗಿರಲಿ!" ಎಂದನು.

ಖಡ್ಗಮೃಗವು ತಲೆಯೆತ್ತಿ ಒಂದುಸಾರಿ ವಿಕೃತ ಧ್ವನಿಯಿಂದ ಅರಚಿತು. ಅರಚುತ್ತ ತಲೆ ಕುಣಿಸುತ್ತ ಮುಂಗಾಲುಗಳಿಂದ ನೆಲ ಕೆದರತೊಡಗಿತು. ಕೆಸರೂ ಮಣ್ಣೂ ಆಚೀಚೆ ಹಾರಿದುವು. ಸೈನಿಕರು ತಮ್ಮ ಜೀವಗಳ ಭಾರವನ್ನು ಸಮರಸೇನನ ಮೇಲೆ ಹಾಕಿದಂತೆ ಅವನ ಸನ್ನೆಗಳನ್ನೇ ಇದಿರು ನೋಡಿ ಕೊಂಡಿದ್ದರು. ಸಮರಸೇನನು ಏನೋ ಹೇಳಬೇಕೆಂದು ಬಾಯಿ ತೆರೆಯುವಷ್ಟರಲ್ಲಿ, ಖಡ್ಗಮೃಗವು ಅವರ ಕಡೆಗೆ ಹಾರುತ್ತ ಹಾರುತ್ತ ಬಂದಿತು.

ಮುಂದಾಗಿ ನಿಂತಿದ್ದ ಸಮರಸೇನನು ತನ್ನ ಮಹಾ ಖಡ್ಗದಿಂದ ಖಡ್ಗಮೃಗದ ಬೆನ್ನಿನ ಮೇಲೆ ಬಲವಾಗಿ ಹೊಡೆದನು. ಬೇರೆ ಯಾವುದೇ ಮೃಗವಾಗಿರುತ್ತಿದ್ದರೆ ಆ ಪೆಟ್ಟಿಗೆ ಮುಗುಚಿ ಬೀಳ ಬೇಕಿತ್ತು. ಆದರೆ ದಪ್ಪ ಚರ್ಮದ ಖಡ್ಗಮೃಗದ ಮೇಲೆ ಆ ಪೆಟ್ಟಿನಿಂದ ಯಾವ ಪರಿಣಾಮವೂ ಆಗಲಿಲ್ಲ. ಆದರೆ ಅದಕ್ಕೆ ನೋವಾಗಿರಬೇಕು. ಅದರಿಂದ ಕೋಪವೇರಿ ಅರಣ್ಯವೆಲ್ಲಾ ಅದುರಿ ಹೋಗುವ ಹಾಗೆ ವಿಕಾರವಾಗಿ ಬೊಬ್ಬಿಡುತ್ತ ಸೈನಿಕರ ಮೇಲೆ ಧುಮುಕಿತು.

ಇಡೀ ಮುಳುಗಿದವನಿಗೆ ಮಳೆ ಚಳಿಗಳ ಭಯ ಹೋಗುವಂತೆ ಈಗ ಸೈನಿನಿಕರು ಸ್ವಲ್ಪವೂ ಹೆದರದೆ, ಸಮರಸೇನನು ಆರಿಸಿದ ನಿಜವಾದ ಧೀರರೇ ಎಂಬಂತೆ ಅದನ್ನು ಹೊಡೆಯ ತೊಡಗಿದರು. ನಾಯಕನ ಧೈರ್ಯ ಸಾಹಸಗಳೂ ಅವರಿಗೆ ಒಳ್ಳೆಯ ಈಟು ಕೊಟ್ಟುವು. ಖಡ್ಗಮೃಗವು ಹೇಗೆ ತಿರುಗಿದರೂ ಪೆಟ್ಟುಗಳೇ! ಆದರ ಹೊಟ್ಟೆಗೂ ಅನೇಕ ಪೆಟ್ಟುಗಳು.

ಕಡೆಗೆ ಖಡ್ಗಮೃಗವು ವಿಪರೀತ ಗಾಯಗಳಿಂದ ಅರಚುತ್ತ ಬದಿಗೆ ಹೊರಳಿಕೊಂಡು ತುಳ್ಳಾಡ



ತೊಡಗಿತು. ಸಮರಸೇನನು ಸೈನಿಕರೊಂದಿಗೆ, "ಏನೋ ಕುಂಡಲಿನೀದೇವಿಯ ದಯೆಯಿಂದ ಸದ್ಯದ ಗಂಡ ಜಾರಿತು. ಇದರ ಬೊಬ್ಬೆ ಕೇಳಿ ಬೇರೆ ಯಾವುದೋ ಪ್ರಾಣಿಗಳು ಇಲ್ಲಿಗೆ ಬರುವುದಕ್ಕೆ ಮೊದಲೇ ನಾವು ತಪ್ಪಿಸಿಕೊಳ್ಳುವುದು ಒಳ್ಳೆಯದು" ಎಂದು ಅಲ್ಲಿಂದ ಹೊರಡ ತೊಡಗಿದನು. ಸೈನಿಕರೂ ಅವನನ್ನು ಅನುಸರಿಸಿದರು.

ಅಲ್ಲಿಂದ ಅವರು ಸ್ವಲ್ಪ ದೂರ ಹೋಗಿ ಯಾವುದೋ ಕಲ್ಲುಬಂಡೆಗಳ ದಂಡೆಯ ಮೇಲೆ ಹತ್ತಿದರು. ಅವರ ಮುಂದೆ ಶುದ್ಧವಾದ ನೀರಿನ ಮಡುವೊಂದು ಕಾಣಿಸಿತು.

ಅದನ್ನು ನೋಡಿದ ಕೂಡಲೇ ಖಡ್ಗಮೃಗ ದೊಂದಿಗೆ ಹೋರಾಡಿ ಬಳಲಿ ಹೋಗಿದ್ದ ಸೈನಿಕರಿಗೆ ಆ ಮಡುವಿನಲ್ಲಿ ಇಳಿದು ದಾಹಶಾಂತಿ ಮಾಡಿ ಕೊಳ್ಳುವ ಆಸೆಯಾಯಿತು. ಅವರಲ್ಲೊಬ್ಬನು, "ಕನ್ನಡಿಯ ಹಾಗೆ ಎಷ್ಟು ಚೆನ್ನಾಗಿದೆ ನೀರು! ಕೆಸರು ರಾಡಿಗಳ ನಡುವೆ ಇದೊಂದು ಅಮೃತ ತಟಾಕ! ಈ ನೀರಿನಲ್ಲಿ ಹಾಯಾಗಿ ಸ್ನಾನ ಮಾಡಿದರೆ ಹೊಸ ಶಕ್ತಿ ಬಂದೀತು!" ಎಂದನು.

ಆ ಮಾತು ಕೇಳಿ ಸಮರಸೇನನು, "ಎಚ್ಚರ! ಇದು ಮಾಂತ್ರಿಕ ದ್ವೀಪವೆಂಬ ಸಂಗತಿಯನ್ನು ಮರೆಯಬೇಡಿರಿ!" ಎಂದು ಎಚ್ಚರಿಸಿದನು.

ಆದರೂ ಇಬ್ಬರು ಸೈನಿಕರು ಧೈರ್ಯದಿಂದ, ಕೆರೆಯಲ್ಲಿ ಮಾಂತ್ರಿಕತ್ವವೇನಿದೆಯೆಂದುಕೊಂಡು, ನೀರಾದರೂ ಕುಡಿಯೋಣವೆಂದು ಆ ಮಡುವಿಗೆ ಇಳಿದರು. ಅವರು ನೀರನ್ನು ಮುಟ್ಟಿದ ಮರುಕ್ಷಣದಲ್ಲಿ ಸುತ್ತುಮುತ್ತಲಿನ ನೀರೆಲ್ಲಾ ಕದಲಿತು. ಒಮ್ಮೆಗೇ ಚೆಂಡುಗಳು ಹಾರಿದಂತೆ ನಾಲ್ಕೈದು ಮೊಸಳೆಗಳು ಅವರ ಮೇಲೆ ಬಿದ್ದುವು. ಅವರು ಕೆಟ್ಟದನಿಯಿಂದ ಕಿರಿಚಿದರು. ಮರುಕ್ಷಣವೇ ದಂಡೆಯಲ್ಲಿ ನಿಂತಿದ್ದ ಸಮರಸೇನನೂ ಸೈನಿಕರೂ ಬಿಲ್ಲಿಗೆ ಬಾಣಗಳನ್ನು ಹೂಡಿ ಅವುಗಳ ಮೇಲೆ ಪ್ರಯೋಗಿಸಿದರೂ ಪ್ರಯೋಜನವಾಗಲಿಲ್ಲ. ಅವರ ಕಣ್ಣೆದುರಿನಲ್ಲೇ ಆ ನಿರ್ಭಾಗ್ಯದ ಇಬ್ಬರು ಸೈನಿಕರನ್ನೂ






ಮೊಸಳೆಗಳು ಮಡುವಿನ ನೀರಿನೊಳಗೆ ಎಳೆದುಕೊಂಡು ಹೋದುವು.

ಇದನ್ನು ನೋಡಿ ಎಲ್ಲರ ಉತ್ಸಾಹವೂ ಮುಳುಗಿಹೋಯಿತು. ಸಮರಸೇನನೂ ಉಳಿದ ನಾಲ್ವರು ಸೈನಿಕರೂ ದೀನವದನಗಳಿಂದ ಅಲ್ಲಿಂದ ಹೊರಟರು. ಈಸಾರಿ ಅವರು ಅತ್ಯಂತ ಜಾಗರೂಕತೆಯಿಂದ ನಡೆಯುತ್ತಿದ್ದರು. ಹೀಗೆ ಸ್ವಲ್ಪ ದೂರ ಹೋದಾಗ ಅವರ ಮುಂದೆ ಒಂದು ದೊಡ್ಡ ಸರೋವರವು ಕಂಡಿತು.

“ಇದು ಬಹಳ ದೊಡ್ಡ ಸರೋವರ. ಇದನ್ನು ದಾಟದೆ ಹೋಗಲು ಸಾಧ್ಯವಿಲ್ಲ. ಹೇಗೆ ದಾಟುವುದು ?” ಎಂದು ಸಂದೇಹಪಡುತ್ತ ಸಮರಸೇನನು ಅದರ ಉದ್ದಳತೆಯನ್ನು ಅಳೆಯುವವನಂತೆ ನಿಂತನು.

ನೋಡುತ್ತಿದ್ದಂತೆ ಆ ಸರೋವರದ ತೀರದಲ್ಲಿ ಯಾರೋ ಸ್ನಾನ ಮಾಡುತ್ತಿರುವ ಹಾಗೆ ನೀರು ಕದಲುವುದು ಕಂಡಿತು. ಆದರೆ ಸ್ನಾನಮಾಡುವವರ ಆಕೃತಿ ಮಾತ್ರ ಕಾಣಲೇ ಇಲ್ಲ. ಸರೋವರದ ಮೇಲುಭಾಗದಲ್ಲಿ ಒಂದು ಮರದ ಕೊಂಬೆ ಕಾಣುತ್ತಿದ್ದಿತು. ಅದರಲ್ಲೊಂದು ವಿಚಿತ್ರ ! ಆ ಕೊಂಬೆಯಿಂದ ಉದ್ದಗಲವಾದ ವಿಚಿತ್ರಾಕೃತಿಯ ಟೋಪಿಯೊಂದು ನೇತಾಡುತಿತ್ತು. ಆ ಟೋಪಿಗೆ ಮನುಷ್ಯನ ಕಣ್ಣುಗಳಂತಹ ಎರಡು ಮಿಂಚುವ ರಂಧ್ರಗಳಿದ್ದುವು !

ಈ ವಿಚಿತ್ರ ದೃಶ್ಯವು ಸೈನಿಕರನ್ನು ಭೀತಸ್ತಬ್ಧ ಮಾಡಿತು. ಸಮರಸೇನನು ಆಶ್ಚರ್ಯಪಡುತ್ತ ಇದೆಲ್ಲಾ ಏನೆಂಬ ಪ್ರಶ್ನೆಗೆ ಉತ್ತರ ಹೊಳೆಯದೆ ಮಿಡುಕುತ್ತಿದ್ದನು. ಸರೋವರದ ನೀರು ಇನ್ನೂ ಕದಲಿಕೊಂಡೇ ಇದ್ದಿತು. ಆ ಕದಲಿಕೆಯ ರೀತಿ ನೋಡುವಾಗ ಯಾರೋ ಮಾಯಾವ್ಯಕ್ತಿ ಸ್ನಾನ ಮಾಡುತ್ತಿದ್ದಾನೆಂದು ಸ್ಪಷ್ಟವಾಗಿ ತಿಳಿಯುತ್ತಿದ್ದಿತು.

“ಅಬ್ಬಾ ! ಇಲ್ಲಿಯ ನೀರೂ ಮಂತ್ರಮಯವೇ ಸರಿ” ಎಂದುಕೊಂಡು ಸೈನಿಕರು ತುಂಬ ಹೆದರಿದರು.

ಸಮರಸೇನನೇ ಮೊದಲಾದವರು ಅವರಿಗೆ ತಿಳಿಯದಂತೆಯೇ ಪೊದೆಯ ಮರೆಯಲ್ಲಿ ಅಡಗಿ ರೆಪ್ಪೆ ಬಡಿಯದೆ ಆ ಅದ್ಭುತವನ್ನು ನೋಡುತ್ತಿದ್ದರು. “ಒಂದು ವೇಳೆ ಇವನು ಆ ಏಕಾಕ್ಷಿ ಮಾಂತ್ರಿಕನಾಗಿದ್ದಾನೋ !” ಎಂಬ ಅನುಮಾನವು ಸಮರಸೇನನ ಮನಸ್ಸಿನಲ್ಲಿ ಎದ್ದಿತು.

ಸ್ವಲ್ಪಹೊತ್ತು ಆಲೋಚನೆ ಮಾಡಿ ನೋಡಿದ ಮೇಲೆ ಇವನು ಏಕಾಕ್ಷಿ ಮಾಂತ್ರಿಕನಲ್ಲವೆಂಬ ನಂಬುಗೆಯುಂಟಾಯಿತು. ಟೋಪಿಯಲ್ಲಿ ಎರಡು ಕಣ್ಣುಗಳಿರುವುದರಿಂದ ಈ ಟೋಪಿಯೂ ಏಕಾಕ್ಷಿಯುದಲ್ಲವೆಂದಾಗುತ್ತದೆ. ಹಾಗಾದರೆ ಇವನಾರೋ ಹೊಸ ಮಾಯಾ ಮಾಂತ್ರಿಕನಿರಬೇಕು. ಹೀಗೆ ಇನ್ನೊಂದು ಸಂಶಯವೆದ್ದಿತು. ಇದ್ದಕ್ಕಿದ್ದ ಹಾಗೆ ಸರೋವರದಲ್ಲಿ ಏನೋ ಮಾತುಗಳು ಹೊರಟುವು.

ಸ್ನಾನಮಾಡುತ್ತಿರುವ ಮಾಯಾವಿ ಏನೋ ಮಂತ್ರ ಪಠನೆ ಮಾಡುವಂತಿತ್ತು ಅದು. ಆ ಕಂಠಸ್ವರದಲ್ಲಿ ಮೊರಟುತನವೂ ಗಾಂಭೀರ್ಯವೂ ಬೆರೆತುಕೊಂಡಿತ್ತು. ಇವನಾವನೋ ತುಂಬಾ ಅಸಾಧ್ಯದವನೇ ಇರಬೇಕೆನಿಸಿತು ಸಮರಸೇನನಿಗೆ.

ಹೀಗೆ ಅನುಮಾನ ತ್ರಿವಳಿಯೊಳಗಿರುವ ಸಮರಸೇನನಿಗೂ ಸೈನಿಕರಿಗೂ ಇನ್ನಿಷ್ಟು ಭಯಾಂದೋಳನೆಯಾಗುವಂತೆ ಇನ್ನೊಂದು ದೃಶ್ಯ ಪ್ರತ್ಯಕ್ಷವಾಯಿತು. ಸರೋವರದ ತೀರದಲ್ಲಿದ್ದ ಪೊದರುಗಳ ಮರೆಯಿಂದ ಒಂದು ಹಾವು ತಲೆಯನ್ನೆತ್ತಿ ಮೇಲೇಳುವುದನ್ನು ನೋಡಿದರು.

ಆದರೆ ಅದು ಹಾವಲ್ಲ. ಅಪೂರ್ವವಾದೊಂದು ಅದ್ಭುತ ಪ್ರಾಣಿ! ಅದು ಪೊದರಿನೊಳಗಿನಿಂದ ಪೂರ್ತಿ ಹೊರಗೆ ಬಂದು ಎದ್ದು ನಿಂತು ನಡೆಯುವಾಗ ಸಾಧಾರಣ ಆನೆಗಿಂತ ನಾಲ್ಕೈದು ಪಾಲು ದೊಡ್ಡದಾಗಿತ್ತು. ಅಷ್ಟು ದೊಡ್ಡ ಪ್ರಾಣಿಯ ತಲೆ ಮಾತ್ರ ಬಹು ಚಿಕ್ಕದು. ಕುತ್ತಿಗೆ ಹಾವಿನಂತೆ ಉದ್ದ.

ಅದೇನು ಮಾಡುವುದೋ ಎಂದು ಸಮರಸೇನಾದಿಗಳು ರೆಪ್ಪೆ ಬಡಿಯದೆ ನೋಡಿಕೊಂಡಿದ್ದರು. ಅದು ಮೆಲ್ಲನೆ ತನ್ನ ಸಣ್ಣ ತಲೆಯನ್ನು ಸರೋವರದ ಕಡೆಗೆ ಚಾಚಿತು. ಕಣ್ಣಿಗೆ ಕಾಣದ ಮನುಷ್ಯನನ್ನು ಹಿಡಿಯಲಿಕ್ಕೇ ಅದು ಪ್ರಯತ್ನಿಸುತ್ತಿತ್ತೆಂದು ಸ್ಪಷ್ಟವಾಯಿತು. ಹೀಗೆ ಆ ಅದ್ಭುತ ಪ್ರಾಣಿಯ ತಲೆ ನೀರಿನ ಮಟ್ಟದ ಒಂದು ಗಜದಷ್ಟು ಎತ್ತರದಲ್ಲಿ ಸರೋವರದ ಮೇಲೆ ಬಂದುದೇ ತಡ, ಸರೋವರದ ನೀರಿನಿಂದ ಕರ್ಕಶವಾದೊಂದು ದೊಡ್ಡ ಕೂಗು ಹೊರಟಿತು. ಆ ಕೂಗು ಹೊರಟಾಗಲೇ ಕೊಂಬೆಯಲ್ಲಿ ನೇತಾಡುವ ವಿಚಿತ್ರಾಕೃತಿಯ ಹೊಳೆಯುವ ಕಣ್ಣುಗಳ ಟೋಪಿ ಕೆಳಕ್ಕೆ ಜಾರಿತು.

"ಓಹೋ! ನೀನೋ ಮಹೋದರಾ! ನನ್ನನ್ನೇ ಭಕ್ಷಿಸಲು ನೋಡುವಿಯಾ? ಈ ಚತುರ್ನೇತ್ರನನ್ನೇ ನುಂಗಲು ಬಂದೆಯೇನು?" ಎಂದು ಕೂಗಿ ಕೇಳಿದನು. ಅವನ ಕೂಗು ಕಾಡಿನಲ್ಲಿ ಬಹು ದೂರದವರೆಗೆ ಕೇಳಿಸುವಂತಿತ್ತು. ಇನ್ನೊಬ್ಬ ಮಾಂತ್ರಿಕನಾದ ಚತುರ್ನೇತ್ರನನ್ನು ನೋಡಿ ಸಮರಸೇನನೂ ಸೈನಿಕರೂ ತುಂಬಾ ಹೆದರಿದರು. ಹೆದರಿಕೆಯೊಂದು ಅಭ್ಯಾಸದಂತಾಗಿ ಕೂಡಲೇ ಧೈರ್ಯವನ್ನೂ ತಂದುಕೊಂಡರು. ಏಕಾಕ್ಷಿ ಮಾಂತ್ರಿಕನ ಬದ್ಧವಿರೋಧಿಯಾದ ಇವನ ಕಣ್ಣಿಗೆ ಕೂಡಾ ತಾವು ಬೀಳಬಾರದೆಂದುಕೊಂಡರು. ಇಲ್ಲಿಂದ ಹೇಗೆ ತಪ್ಪಿಸಿಕೊಳ್ಳುವುದೆಂದು ಆಲೋಚಿಸುತ್ತ ಸಮರಸೇನನು ಅಡಗಿದ್ದಲ್ಲಿಂದಲೇ ಸುತ್ತಲೂ ನೋಡಿದನು. (ಇನ್ನೂ ಇದೆ)








# ಕೀರ್ತಿಕಾಂಕ್ಷೆ

**ತಿ**ರುಗುವ ಚಕ್ಕದಲ್ಲಿ ಸಿಕ್ಕಿ ಮತ್ತೆ ಮೊದಲಿನಂತೆಯೇ ತಿರುಗಬೇಕಾಗಿ ಬಂದ ರಾಜಾ ತ್ರಿವಿಕ್ರಮನು, ಹೆಗಲು ಖಾಲಿಯಾದ ಕೂಡಲೇ ಹಿಂದಿರುಗಿ ಮರದ ಬಳಿಗೆ ಹೋಗಿ, ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ಕೆಳಗಿಳಿಸಿ ತನ್ನ ಹೆಗಲಿಗೇರಿಸಿಕೊಂಡು ಮೌನಮುದ್ರೆಯಿಂದ ಸ್ಮಶಾನದ ಕಡೆಗೆ ನಡೆಯತೊಡಗಿದನು. ಆಗ ಶವದೊಳಗೆ ಸೇರಿಕೊಂಡ ಬೇತಾಳವು ಮಾತಾಡಲು ತೊಡಗಿ, "ಎಲೈ ಮಹಾರಾಜನೇ, ನೀನು ನಿಜವಾಗಿಯೂ ಕೀರ್ತಿಕಾಂಕ್ಷೆಯಿಂದ ಈ ಬೇತಾಳವಾಹನ ದೀಕ್ಷೆ ಹಿಡಿದಿರುವಿಯೋ ನನಗಂತೂ ತಿಳಿಯದು. ಕೀರ್ತಿಗಳಿಸಬೇಕೆಂದು ತುಂಬಾ ಪ್ರಯತ್ನಪಟ್ಟ ಮುಕುಂದನಿಗಂತೂ ಅವನ ಪ್ರಯತ್ನಕ್ಕೆ ಫಲ ದೊರೆಯಲಿಲ್ಲ. ದಾರಿಯ ಶ್ರಮ ತಿಳಿಯದಂತೆ ಆ ಕಥೆಯನ್ನು ಹೇಳುತ್ತೇನೆ. ಕೇಳುತ್ತಾ ನಡೆ." ಎಂದು ಕಥೆಯನ್ನು ಹೇಳತೊಡಗಿತು :

ಮುಕುಂದನು ಒಂದು ಗ್ರಾಮದಲ್ಲಿ ಸಾಮಾನ್ಯನಾದೊಬ್ಬ ರೈತನಿಗೆ ಮಗನಾಗಿ ಹುಟ್ಟಿದವನು. ಆದರೆ ಅವನು ಎಲ್ಲಾ ರೈತ ಹುಡುಗರಂತಿರಲಿಲ್ಲ. ಅಸಾಧಾರಣವಾದ ಧಾರಣ ಶಕ್ತಿಯುಳ್ಳವನು. ಆದುದ

## ಬೇತಾಳ ಕಥೆಗಳು



ರಿಂದ ಅವನಿಗೆ ಅನೇಕ ವಿದ್ಯೆಗಳು ಹತ್ತಿಕೊಂಡಿದ್ದುವು. ಆದರೆ ಯಾವ ವಿದ್ಯೆಯನ್ನೂ ಸರಿಯಾಗಿ ಉಪಯೋಗಿಸಿಕೊಳ್ಳುವ ಸೌಲಭ್ಯವಿಲ್ಲದೆ ರೈತನಾಗಿಯೇ ಜೀವಿಸಬೇಕಾಯಿತು.

ಅವನ ಊರು ಸಾಧಾರಣ ಗ್ರಾಮವಾಗಿದ್ದರೂ ಅದು ಒಂದು ಕಾಲದಲ್ಲಿ ಚರಿತ್ರ ಪ್ರಸಿದ್ಧವಾದ ಕ್ಷೇತ್ರವಾಗಿತ್ತು. ಅಲ್ಲಿ ಅಪೂರ್ವವಾದ ಶಿಥಿಲಗಳೂ ಶಾಸನಗಳೂ ಹೊರಬೀಳುತ್ತಿದ್ದುವು. ಅವುಗಳನ್ನು ಪರಿಶೀಲಿಸಲು ದೊಡ್ಡ ದೊಡ್ಡ ಕೀರ್ತಿಶಾಲಿಗಳಾದ ಮನುಷ್ಯರು ಅಲ್ಲಿಗೆ ಬರುತ್ತಿದ್ದರು. ಮುಕುಂದನು ಅವರನ್ನು ಸಂಧಿಸಿ ಮಾತಾಡುವನು. ಆಗ ಅವನ ಮನಸ್ಸಿಗೆ ಬಹಳ ಆಶ್ಚರ್ಯವಾಗುತ್ತಿತ್ತು. "ಅವರು ನನಗಿಂತ ಹೆಚ್ಚಿನ ಬುದ್ಧಿವಂತರೇನಲ್ಲ. ಇವರಿಗೆ ಇಷ್ಟು ದೊಡ್ಡ ಹೆಸರು ಹೇಗೆ ಬಂದಿತೋ?" ಎಂದು ತೋರುತ್ತಿತ್ತು. ಇಂತಹ ಯೋಗ್ಯತೆ ಇರುವ ತನಗೆ ಕೂಡಾ ಇಂತಹ ಕೀರ್ತಿ ಬಂದರೆ ಚೆನ್ನಾಗಿತ್ತು ಅಂದು ಕೊಳ್ಳುವನು. ಅನೇಕರೊಂದಿಗೆ ಬಹಿರಂಗವಾಗಿಯೇ ತನ್ನ ಅನಿಸಿಕೆಗಳನ್ನು ಹೇಳುತ್ತಿದ್ದನು.

ಒಬ್ಬ ಮುದುಕನು ಮುಕುಂದನ ಕೀರ್ತಿಕಾಂಕ್ಷೆಯನ್ನು ಕಂಡುಹಿಡಿದು, "ನಿನ್ನಂಥವನು ಈ ಹಳ್ಳಿಯ ಮೂಲೆಯಲ್ಲಿ ಕುಳಿತುಕೊಂಡಿದ್ದರೆ ನಿನ್ನ ಬುದ್ಧಿವಂತಿಕೆಗಳೆಲ್ಲ ಹೇಗೆ ಬೆಳಕಿಗೆ ಬಂದಾವು? ಹತ್ತು ಮಂದಿ ಮೆಚ್ಚಿ ಹೆಸರು ಬರಬೇಕಾದರೆ ನಗರಕ್ಕೇ ಹೋಗಬೇಕು" ಎಂದನು.

ಈ ಮಾತು ಮುಕುಂದನ ಮನಸ್ಸಿಗೆ ಚೆನ್ನಾಗಿ ನಾಟಿತು. ತಂದೆ ಬೇಡ ಬೇಡವೆಂದರೂ ಕೇಳದೆ ನಗರಕ್ಕೆ ಹೊರಟೇ ಬಿಟ್ಟನು.

ಅವನು ಹೋಗುವ ದಾರಿಯಲ್ಲಿ ಒಂದು ಅರಣ್ಯವು ತಗುಲುತ್ತಿತ್ತು. ಅಂತಹ ದಾರಿಯಲ್ಲಿ ಒಂಟಿಯಾಗಿ ನಡೆಯಲು ಬಹಳ ಮಂದಿ ಹೆದರುತ್ತಾರೆ. ಆದರೆ ಹಾಗೆ ಭಯಪಡುವುದು ತನ್ನಂತಹ ಧೈರ್ಯಶಾಲಿಗೆ ಅವಮಾನಕರವೆಂದುಕೊಂಡು ಮುಕುಂದನು ಒಬ್ಬಂಟಿಗನಾಗಿಯೇ ಅರಣ್ಯದಾರಿಯಲ್ಲಿ ಸಾಗಿದನು.

ಅರ್ಧ ದಾರಿಯಲ್ಲಿ ಒಬ್ಬ ಕಳ್ಳನು ಅವನನ್ನು ಅಡ್ಡಗಟ್ಟಿದನು. ಮುಕುಂದನು ಅವನೊಂದಿಗೆ ಹೊಡೆದಾಟಕ್ಕೆ ನಿಂತು ನಿಮಿಷಮಾತ್ರದಲ್ಲಿ ಅವನನ್ನು ಸೋಲಿಸಿಬಿಟ್ಟನು.

ಕಳ್ಳನು ಆಶ್ಚರ್ಯಪಡುತ್ತ, "ಹತ್ತು ವರ್ಷಗಳಿಂದ ಕಳ್ಳತನ ಮಾಡುವವನು ನಾನು. ಚೋರವೀರೇಂದ್ರನೆಂಬ ಹೆಸರು ಕೇಳಿದರೇನೇ ಮಹಾಮಹಾ ವೀರರೆಲ್ಲ ಹೆದರಿ ಸಾಯುತ್ತಾರೆ. ನಿನ್ನಂಥವನು ಇಷ್ಟರವರೆಗೂ ನನಗೆ ತಗಲಲಿಲ್ಲ!" ಎಂದನು.

ತನ್ನ ಕೈಯಲ್ಲಿ ಸೋತವನು ವೀರೇಂದ್ರನೆಂಬ ಚೋರಶಿಖಾಮಣಿಯೆಂದು ತಿಳಿದು ಮುಕುಂದನಿಗೂ ಆಶ್ಚರ್ಯವಾಯಿತು.

"ಹೌದು. ನಾನು ಕೂಡಾ ಏನೋ ಒಂದು ವಿಧವಾಗಿ ಹೆಸರು ಪಡೆಯಬೇಕೆಂದೇ ಹೊರಟಿದ್ದೇನೆ.

ಒಳ್ಳೆಯ ಹೆಸರಿಗೆ ಚೋರವಿದ್ಯೆಯೂ ಸೇರು ವಂಥಾದ್ದೇ ಯಾಕಾಗಬಾರದು? ನಿನಗೂ ದೊಡ್ಡ ಹೆಸರುಬಂದು ಪ್ರಸಿದ್ಧನಾಗಿರುವಿಯಲ್ಲಾ! ನನಗೆ ಕೂಡಾ ಕಳ್ಳ ತನದ ಸೂಕ್ಷ್ಮಗಳನ್ನು ಕಲಿಸಿಬಿಡು. ನಿನ್ನೊಂದಿಗೆ ಸೇರಿಕೊಂಡಿರುತ್ತೇನೆ" ಎಂದು ಮುಕುಂದನು ವೀರೇಂದ್ರನೊಂದಿಗೆ ಹೇಳಿದನು.

ಅದಕ್ಕೆ ಚೋರವೀರೇಂದ್ರನು ಸಂತೋಷದಿಂದ ಒಪ್ಪಿ, "ಹಾಗಾದರೆ ನಾವು ನಗರಕ್ಕೆ ಹೋಗೋಣ. ಅಲ್ಲಿ ನಿನಗೆ ಚೋರರಹಸ್ಯಗಳನ್ನು ಕಲಿಸಿಕೊಡು ತ್ತೇನೆ" ಎಂದನು ಮುಕುಂದನೊಂದಿಗೆ.

ಹಾಗೆಯೇ ಇಬ್ಬರೂ ಜತೆಯಾಗಿ ನಗರಕ್ಕೆ ಹೋದರು. ಹಗಲಿನಲ್ಲಿ ವೀರೇಂದ್ರನು ಕಳ್ಳತನ ಮಾಡಲು ಒಂದು ಮನೆಯನ್ನು ನೋಟನೋಡಿ ಆರಿಸಿಕೊಂಡನು. ರಾತ್ರಿಯಲ್ಲಿ ಇಬ್ಬರೂ ಆ ಮನೆಯ ವಠಾರದ ಗೋಡೆಯನ್ನು ಹಾರಿ ಏರಿ ಆವರಣದೊಳಗೆ ಧುಮುಕಿದರು. ವೀರೇಂದ್ರನು ಆ ಮನೆಯ ಹಿಂದಿನ ಬಾಗಿಲನ್ನು ಹೊರಗಿನಿಂದಲೇ ಬೆಣೆತಿರುಗಿಸಿ ಲಾಘವ ದಿಂದ ತೆರೆದನು. ಅವನ ಪ್ರತಿ ಚರ್ಯೆಗಳನ್ನೂ ಮುಕುಂದನು ಶ್ರದ್ಧೆಯಿಂದ ನೋಡುತ್ತಿದ್ದನು.

ಇಬ್ಬರೂ ಕಬ್ಬಿಣದ ಪೆಟ್ಟಿಗೆಯ ಕೋಣೆಗೆ ಹೊಕ್ಕರು. ವೀರೇಂದ್ರನು ಕೊಕ್ಕೆಯಿಂದ ಉಪಾಯ ವಾಗಿ ಪೆಟ್ಟಿಗೆಯ ಬಾಯಿತೆರೆದು ಅದರಲ್ಲಿದ್ದ ಹಣ ವನ್ನೂ, ಆಭರಣಗಳನ್ನೂ ಮೂಟೆ ಕಟ್ಟಿಕೊಂಡನು.

ಇನ್ನು ಅವರು ಅಲ್ಲಿಂದ ಹೊರಡಲು ತಯಾ ರಾದಾಗ ವೀರೇಂದ್ರನು ಗೋಡೆಗೆ ತಗಲಿಸಿದ್ದ ಒಂದು ಹೆಂಗುಸಿನ ಚಿತ್ರಪಟವನ್ನು ನೋಡಿ ಮೆಟ್ಟಿಬಿದ್ದನು, ತರುವಾಯ ಅವನು ಪಕ್ಕದ ಕೋಣೆಯೊಳಗೆ ಬಗ್ಗಿ ನೋಡಿ, ಅಲ್ಲಿ ನಿದ್ರಿಸಿಕೊಂಡಿದ್ದವರನ್ನು ಗಮನಿಸಿ, ತನ್ನ ಮೂಟೆಯನ್ನು ಅಲ್ಲೇಬಿಟ್ಟು, ಮುಕುಂದನನ್ನು ಕರೆದುಕೊಂಡು ಸಪ್ಪಳಿಲ್ಲದೆ ಆ ಮನೆಯಿಂದ ಹೊರಗೆ ಹೋಗಿಬಿಟ್ಟನು.



"ಇದೆಂಥ ಕಳ್ಳತನ? ಕಷ್ಟಪಟ್ಟು ಗಂಟು ಕಟ್ಟಿ ಕೊಂಡುದನ್ನೆಲ್ಲಾ ಅಲ್ಲೇ ಬಿಟ್ಟುಬಿಟ್ಟೆಯಲ್ಲ?" ಎಂದನು ಮುಕುಂದ ಬೇಸರದಿಂದ.

"ಒಂದುಸಾರಿ ನಾನು ಕಾಡಿನಲ್ಲಿ ಗಾಯಪಟ್ಟು, ತಾಳಲಾಗದ ನೋವಿನಿಂದ ಮೂರ್ಛೆಹೋಗಿ ಬಿದ್ದಿದ್ದೆ. ಸ್ವಲ್ಪಹೊತ್ತಿಗೆ ಸಾಯುತ್ತಿದ್ದೆ ಕೂಡಾ. ಆಗ ಆ ದಾರಿಯಾಗಿ ಗಾಡಿಯಲ್ಲಿ ತನ್ನ ತೌರುಮನೆಗೆ ಹೋಗು ತ್ತಿದ್ದ ಒಬ್ಬಳು ಹೆಂಗುಸು, ಸಾವುಬದುಕುಗಳ ಅಂಚಿ ನಲ್ಲಿದ್ದ ನನ್ನನ್ನು ತನ್ನ ಗಾಡಿಯಲ್ಲಿ ಹಾಕಿಸಿಕೊಂಡು ತನ್ನ ತೌರುಮನೆಗೆ ಒಯ್ದು, ನನಗೆ ಚಿಕಿತ್ಸೆ ಮಾಡಿಸಿ ಕಾಪಾಡಿದಳು. ಈಗ ನಾನು ಕದ್ದಿರುವುದು ಅವಳ ಗಂಡನ ಮನೆಯಲ್ಲೇ. ಪ್ರಾಣವನ್ನು ಕಾಪಾಡಿದವರ ಅಗ್ರುದ ಕಡ್ಡಿಕೂಡಾ ಮುಟ್ಟಲಾರೆನೆಂಬುದು ನನ್ನ ನಿಯಮ" ಎಂದನು ಕಳ್ಳ.

ವೀರೇಂದ್ರನಂಥ ಮೂಢಭಾವದ ಸಡಿಲು ಮನಸ್ಸಿ ನವನ ಹತ್ತಿರ ತಾನು ಕಲಿಯುವಂಥಾದ್ದು ಏನೂ



ಇಲ್ಲವೆಂದು ಮುಕುಂದನಿಗೆ ತೋರಿ, ಅವನನ್ನು ಬಿಟ್ಟು ಹೊರಟುಹೋದನು.

ಅವನು ನಗರಕ್ಕೆ ಹೋಗಿ ಎಲ್ಲಿ ಬಿಡಾರ ಹೂಡುವುದೆಂದು ಹುಡುಕಾಡಿಕೊಂಡಿದ್ದನು. ಹಾಗೆ ಅವನು ಅವರಿವರೊಡನೆ ಮಾತಾಡುವಾಗ, ನ್ಯಾಯಾಧೀಶನಾದ ಶರಶ್ಚಂದ್ರನೊಂದಿಗೆ ಅವನಿಗೆ ಪರಿಚಯವಾಯಿತು.

ಅದೊಂದು ಆಕಸ್ಮಿಕ ಪರಿಚಯು. ಆ ನ್ಯಾಯಾಧೀಶನು ಅತಿಥಿಯೊಬ್ಬನಿಲ್ಲದೆ ಒಬ್ಬಂಟಿಗನಾಗಿ ಊಟ ಮಾಡುವುದಿಲ್ಲವೆಂದು ನಿಯಮವಿಟ್ಟುಕೊಂಡವನು. ಆತನು ದಿನಾ ಯಾವನೋ ಒಬ್ಬ ಅತಿಥಿಯನ್ನು ತನ್ನೊಂದಿಗೆ ಊಟಕ್ಕೆ ಕುಳ್ಳಿರಿಸುತ್ತಿದ್ದನು. ಒಂದು ದಿನ ಮುಕುಂದನೇ ಅವನಿಗೆ ಅತಿಥಿಯಾಗಿ ದೊರೆತನು. ಅವನು ಮುಕುಂದನ ಪರಿಸ್ಥಿತಿಯನ್ನು ತಿಳಿದು, "ನೀನು ಎಲ್ಲಿಯಾದರೂ ಸ್ಥಿರಪಡುವವರೆಗೆ ನನ್ನ ಮನೆಯಲ್ಲಿಯೇ ಇದ್ದುಬಿಡು" ಎಂದನು. ಮುಕುಂದನು ಸರಿಯೆಂದು ಅಲ್ಲಿಯೇ ಇದ್ದನು. ಆ ನಗರದಲ್ಲಿ ಚಕ್ರಧರನೆಂಬ ಮಹಾವೀರನೊಬ್ಬನಿದ್ದನು. ಅವನನ್ನು ಇದಿರಿಸಿ ಯುದ್ಧದಲ್ಲಿ ಸೋಲಿಸಿಬಿಟ್ಟರೆ, ತನಗೆ ಮಹಾವೀರನೆಂಬ ಖ್ಯಾತಿ ಬರುತ್ತದೆಂದು ಮುಕುಂದನಿಗೆ ತೋರಿತು. ಆದರೆ ಮುಕುಂದನು ಒಮ್ಮೆಗೇ ಅವನನ್ನು ಇದಿರಿಸದೆ, ಅವನ ಅಭ್ಯಾಸಗಳು ಏನು ಎಂತಹುದೆಂದು ತಿಳಿಯಲು ಪ್ರಯತ್ನಿಸಿದನು.

ಚಕ್ರಧರನು ದಿನಾ ಸಾಯಂಕಾಲದ ಹೊತ್ತಿನಲ್ಲಿ ತನ್ನ ಮನೆಯ ತೋಟದಲ್ಲಿ ವಿಹರಿಸಿಕೊಂಡಿರುವನು. ಒಂದು ದಿನ ಮುಕುಂದನು ಚಕ್ರಧರನ ತೋಟದೊಳಗೆ ರಹಸ್ಯವಾಗಿ ಪ್ರವೇಶಿಸಿ, ಒಂಟಿಯಾಗಿರುವ ಚಕ್ರಧರನ ಮುಂದೆ ಫಕ್ಕನೆ ಹೋಗಿ ಕತ್ತಿಹಿರಿದು ಸಿದ್ಧನಾಗಿ ನಿಂತನು.

"ಯಾರು ನೀನು?" ಎಂದು ಚಕ್ರಧರನು ಆಶ್ಚರ್ಯದಿಂದ ಕೇಳಿದನು.

"ನಿನ್ನನ್ನು ಜಯಿಸಿ ನಿನಗಿಂತ ಹೆಚ್ಚಿನ ವೀರನೆನಿಸಿಕೊಳ್ಳಬೇಕೆಂದು ಬಂದೆನು. ಸಿದ್ಧನಾಗು" ಎಂದನು ಮುಕುಂದ.

"ಹಾಗಿದ್ದರೆ ಹೀಗೆ ರಹಸ್ಯವಾಗಿ ಏಕೆ ಬಂದೆ? ಹತ್ತು ಮಂದಿಗಳ ಮುಂದೆ ಧೈರ್ಯದಿಂದ ಈ ಮಾತು ಹೇಳಿ ಬರಬೇಕಿತ್ತು." ಎಂದನು ಚಕ್ರಧರ.

"ಹತ್ತು ಮಂದಿಗಳ ಮುಂದೆ ಸೋತುಹೋಗಲು ನನಗಿಷ್ಟವಿಲ್ಲ. ಎಲ್ಲದಕ್ಕೂ ಮೊದಲು ನಿನ್ನ ಸಾಮರ್ಥ್ಯವನ್ನು ತಿಳಿದುಕೊಳ್ಳೋಣವೆಂದು ಹೀಗೆ ಬಂದೆ." ಎಂದನು ಮುಕುಂದ.

ಕೂಡಲೇ ಚಕ್ರಧರನು ಒರೆಯಿಂದ ಕತ್ತಿಯನ್ನು ಸೆಳೆದುಕೊಂಡು ಮುಕುಂದನನ್ನು ಇದಿರಿಸಿದನು. ನಿಮಿಷ ಮಾತ್ರದಲ್ಲಿ ಮುಕುಂದನು ಚಕ್ರಧರನನ್ನು ನಿರಾಯುಧನನ್ನಾಗಿ ಮಾಡಿಬಿಟ್ಟನು. ಚಕ್ರಧರನು ಆಶ್ಚರ್ಯಪಡುತ್ತ "ನಿನ್ನದು ಗುರುವಿನಿಂದ

ಕಲಿತ ವಿದ್ಯೆಯಂತೆ ಕಾಣುವುದಿಲ್ಲ. ನೀನು ಖಡ್ಗ ಯುದ್ಧವನ್ನು ಸಹಜವಾಗಿಯೇ ಕಲಿತಹಾಗಿದೆ. ನೀನು ನನ್ನೊಂದಿಗೆ ಸ್ನೇಹವಾಗಿದ್ದರೆ, ನಿನ್ನಿಂದ ಕೆಲವು ಸೂಕ್ಷ್ಮ ಸುಳಿವುಗಳನ್ನು ನಾನು ಕಲಿಯುತ್ತೇನೆ. ಆಗ ಬಹುದೆ? " ಎಂದನು.

" ಅದರಿಂದ ನನಗಾಗುವ ಲಾಭವೇನು? " ಎಂದು ಮುಕುಂದನು ಕೇಳಿದನು.

" ನಿನಗೆ ದಿನಕ್ಕೆ ನೂರುವರಹ ಸಂಬಳ ಕೊಡು ತ್ತೇನೆ " ಎಂದನು ಚಕ್ರಧರ.

ದೊಡ್ಡ ಹೆಸರು ಬರಿಸಿಕೊಳ್ಳಬೇಕಾದರೆ ಎಲ್ಲದ ಕ್ಕಿಂತಲೂ ಮಿಂಚಿದ ಸಾಧನ ಹಣವೇ ಎಂದುಕೊಂಡು ಮುಕುಂದನು ಚಕ್ರಧರನ ಕೆಳಗೆ ಕೆಲಸಮಾಡಲು ಒಪ್ಪಿ ಕೊಂಡನು.

ಎರಡು ತಿಂಗಳು ಚಕ್ರಧರನು ಮುಕುಂದನಿಂದ ಖಡ್ಗಬೀಸಾಟ ಕಲಿತು, ಮುಕುಂದನನ್ನೇ ಮೀರಿಸಿ ಬಿಟ್ಟನು. ಆಮೇಲೆ ಮುಕುಂದನು ಅಲ್ಲಿಂದ ಹೊರಟು ಹೋಗಬೇಕಾಯಿತು. ಆಗ ಅವನ ಹತ್ತಿರ ಆರು ಸಾವಿರ ವರಹಗಳು ಸೇರಿದ್ದುವು. ಆ ಹಣದಿಂದ ವ್ಯಾಪಾರವನ್ನು ಪ್ರಾರಂಭಿಸಿ ಕೀರ್ತಿಗಳಿಸಿಕೊಳ್ಳಬಹು ದೆಂದುಕೊಂಡು ರತ್ನಶೆಟ್ಟಿ ಎಂಬ ಪ್ರಸಿದ್ಧ ವರ್ತಕನ ಹತ್ತಿರ ಆಲೋಚನೆ ಕೇಳಿದನು.

ರತ್ನಶೆಟ್ಟಿ ವ್ಯಾಪಾರದಿಂದಲೇ ದೊಡ್ಡವನಾಗಿ ನಗರದ ವ್ಯಾಪಾರಿಗಳಿಗೆಲ್ಲಾ ಅಧ್ಯಕ್ಷನಾಗಿದ್ದನು. ಅವನ ಆಲೋಚನೆಯಂತೆಯೇ ಮುಕುಂದನು ವ್ಯಾಪಾರ ವನ್ನು ಪ್ರಾರಂಭಿಸಿ ಒಂದು ವರ್ಷವಾಗುವಷ್ಟರಲ್ಲಿ ಲಕ್ಷಾಧಿಪತಿಯಾದನು.

" ಮುಕುಂದಾ, ನಿನಗೆ ಬಂದ ಲಾಭದಲ್ಲಿ ಹತ್ತನೇ ಒಂದಂಶವನ್ನು ದಾನಧರ್ಮಗಳಿಗೆ ಖರ್ಚುಮಾಡು. ಅದೇ ನಿನಗೆ ಶ್ರೀರಾಮರಕ್ಷೆ." ಎಂದು ರತ್ನಶೆಟ್ಟಿ ಹೇಳಿದ್ದನು. ಮುಕುಂದನು ತಪ್ಪದೆ ಹಾಗೆಯೇ ಮಾಡುತ್ತಿದ್ದನು.




ತಾನು ಲಕ್ಷಾಧಿಕಾರಿಯಾದರೂ ತನಗೆ ಕೀರ್ತಿ ಬಂದಂತೆ ಮುಕುಂದನಿಗೆ ಅನಿಸಲಿಲ್ಲ. ಯಾರೂ ತನ್ನನ್ನು ಗೌರವಿಸಲೂ ಇಲ್ಲ. ಅಂತಲೇ ಅವನು ವ್ಯಾಪಾರವನ್ನೂ ದಾನಧರ್ಮಗಳನ್ನೂ ಕಟ್ಟಿಟ್ಟು, ಖ್ಯಾತಿ ಪಡೆಯಲಿಕ್ಕಾಗಿ ಚಿತ್ರಲೇಖನವನ್ನೂ, ಸಂಗೀತವನ್ನೂ ಅಭ್ಯಾಸಮಾಡಿ ಸಾಧಿಸಿ ನೋಡಿ ದನು. ಅದರಲ್ಲಿಯೂ ಅವನಿಗೇನೂ ಕೀರ್ತಿ ಬಾರದಿರಲು ಇನ್ನೇನು ದಾರಿಯೋ ಎಂದು ಚಿಂತಿಸ ತೊಡಗಿದನು.

ಹೀಗಿರುವಾಗ ಒಂದು ದಿನ ಮುಕುಂದನ ತಂದೆ ನಗರಕ್ಕೆ ಬಂದನು. ಒಂದು ಬೀದಿಯಲ್ಲಿ ಅಕಸ್ಮಾತ್ತಾಗಿ ತಂದೆಯನ್ನು ನೋಡಿ ಮುಕುಂದನು, " ಏನಪ್ಪಾ, ಹೀಗೆ ಬಂದಿರಲ್ಲ? " ಎಂದು ಆಶ್ಚರ್ಯ ದಿಂದ ಕೇಳಿದನು.

" ಈ ವರ್ಷ ನಮ್ಮ ಹೊಲದಲ್ಲಿ ಮೂರು ಬೆಳೆಗಳೂ ಅತ್ಯಮೋಘವಾಗಿ ಬಂದುವು. ಅದಕ್ಕಾಗಿ

ನಾನು ಬಹಳ ಕಾಲದಿಂದ ಪ್ರಯತ್ನ ಮಾಡುತ್ತಾ ಇದ್ದೆ. ಈ ವರ್ಷ ತಕ್ಕ ಫಲಬಂದಿತು. ಮಹಾರಾಜರು ನನ್ನನ್ನು ಸನ್ಮಾನಿಸಬೇಕೆಂದು ಕರೆಯಿಸಿದ್ದಾರೆ." ಎಂದನು ಮುಕುಂದನ ತಂದೆ.

ಮುಕುಂದನೂ ತಂದೆಯೊಂದಿಗೆ ರಾಜನ ಸಭೆಗೆ ಹೋದನು. ತನ್ನ ತಂದೆಗೆ ರಾಜ ಸಭೆಯಲ್ಲಿ ನಡೆದ ಗೌರವ ಮರ್ಯಾದೆಗಳನ್ನು ಕಣ್ಣಾರೆ ನೋಡಿದನು. ಆ ಕ್ಷಣದಲ್ಲಿ ಅವನ ತಳಮಳವೆಲ್ಲಾ ಮಾಯವಾಯಿತು. ಎಲ್ಲಾ ಆಲೋಚನೆಗಳೂ ಹಾರಿ ಹೋದುವು. ಸಂತೋಷದಿಂದ ತಂದೆಯೊಂದಿಗೆ ಗ್ರಾಮಕ್ಕೆ ಹಿಂದಿರುಗಿ, ಮೊದಲಿನಂತೆ ತನ್ನ ಹೊಲ ಗದ್ದೆಗಳ ಕೆಲಸವನ್ನು ನೋಡಿಕೊಳ್ಳುತ್ತಾ ಇದ್ದನು. ಅವನ ಕೀರ್ತಿಕಾಂಕ್ಷೆ ಮಾಯವಾಗಿತ್ತು,

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜಾ, ಮುಕುಂದನ ಕೀರ್ತಿಕಾಂಕ್ಷೆ ಮಾಯವಾಗಿ ಹೋಗಲು ಕಾರಣವೇನು? ತನಗೆ ಕೀರ್ತಿ ತಂದುಕೊಳ್ಳುವ ಸಾಮರ್ಥ್ಯವಿಲ್ಲವೆಂದುಕೊಂಡನೆ? ಅಥವಾ ತಂದೆಯನ್ನು ನೋಡಿದಕೂಡಲೇ ಅವನಿಗೆ ಮನೆಯ ಮೋಹ ಅಂಟಿಕೊಂಡಿತೆ? ಅವನು ಮಾಡಿದ ಎಲ್ಲಾ ಪ್ರಯತ್ನಗಳಲ್ಲಿಯೂ ವಿಜಯವನ್ನೇ ಸಾಧಿಸಿರುವಾಗ ಕೀರ್ತಿಯ ಮೇಲೆ ನಿರಾಶೆ ಬರಲು ಕಾರಣವೇನು? ಈ ಸಂಶಯಗಳಿಗೆ ಸಮಾಧಾನ ತಿಳಿದಿದ್ದೂ ಹೇಳದೆ ಹೋದರೆ ನಿನ್ನ ತಲೆ ಸಾವಿರ ಹೋಳುಗಳಾಗುತ್ತದೆ!" ಎಂದು ಹೇಳಿ ಸುಮ್ಮನಾಯಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು: "ಮುಕುಂದನು, ಕೆಲವು ಕಾರ್ಯಗಳಲ್ಲಿ ಮಾತ್ರವೇ ಕೀರ್ತಿ ಬರುತ್ತದೆಂದು ತಪ್ಪಾಗಿ ತಿಳಿದುಕೊಂಡಿದ್ದನು. ಸಾಧಾರಣವಾಗಿ ಯಾವ ಕಾರ್ಯದಲ್ಲಾದರೂ ಕೀರ್ತಿ ಪಡೆದುಕೊಳ್ಳುವ ಶಕ್ತಿಸಾಮರ್ಥ್ಯಗಳು ಅವನಿಗಿದ್ದುವು. ಆದರೆ ನಿಜವಾದ ಕೀರ್ತಿಯನ್ನು ತಂದುಕೊಂಡು, ಅದನ್ನು ದೃಢವಾಗಿ ನಿಲ್ಲಿಸಿಕೊಳ್ಳುವಂತಹ ಸಾಧನೆಯೂ ನಿಯಮಬದ್ಧತೆಯೂ ಅವನಲ್ಲಿಲ್ಲ. ತನ್ನ ತಂದೆ ವ್ಯವಸಾಯದಲ್ಲಿ ದೇಶದೊಳಗೆಲ್ಲಾ ಅಗ್ರಗಣ್ಯನಾಗಿ ಯಾವಾಗ ಆರಿಸಲ್ಪಟ್ಟನೋ ಆಗಲೇ ಮುಕುಂದನಿಗೆ ತನ್ನ ತಪ್ಪು ಗೊತ್ತಾಯಿತು. ಕೀರ್ತಿಗಾಗಿ ತಾನು ಎಲ್ಲೆಲ್ಲೋ ತಿರುಗಿ ಏನೇನೋ ಮಾಡಿರಬೇಕಾಗಿದ್ದಿಲ್ಲ. ದೃಢದೀಕ್ಷೆಯಿದ್ದರೆ ತನ್ನ ಗ್ರಾಮದಲ್ಲಿದ್ದೇ ಮಾಮೂಲು ವ್ಯವಸಾಯದಲ್ಲಿಯೇ ಕೀರ್ತಿಶಾಲಿಯಾಗ ಬಹುದೆಂದು ಕಡೆಗೆ ಅವನಿಗೆ ಗೊತ್ತಾಯಿತು. ಅಂತೆಯೇ ಮುಕುಂದನು ತಂದೆಯೊಂದಿಗೆ ಮನೆಗೆ ಹಿಂದಿರುಗಿದನು."

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಮರದ ಕೊಂಬೆಯಲ್ಲಿ ನೇತಾಡಿತು,





# ಕಳ್ಳನ ಮಗ

ಒಂದು ಊರಿನಲ್ಲಿ ಸಿಂಗನೆಂಬ ಚೋರವೃತ್ತಿಯವನಿದ್ದನು. ಅವನ ತಂದೆತಾತ ಮುತ್ತಾತರೆಲ್ಲಾ ಚೋರವೃತ್ತಿಯನ್ನೇ ಹಿಡಿದು ಜೀವನ ನಡೆಸಿಕೊಂಡಿದ್ದರು. ಚೋರವೃತ್ತಿಯೆಂಬುದು ಗುಟ್ಟಿನ ಕೆಲಸವಾದುದರಿಂದ ಎಲ್ಲರಿಗೂ ಕಾಣುವಂತೆ, ಪಶುಪಾಲನೆ ತೋಟದ ಕೆಲಸ ಎಂದೇನೋ ಇರುತ್ತಿತ್ತು. ಸಿಂಗನ ಮಗ ರಾಮನಿಗೆ ಮಾತ್ರ ಈ ಹೊರಗೊಂದು ಒಳಗೊಂದರ ಕೆಲಸ ಹಿಡಿಸಲಿಲ್ಲ.

ರಾಮನು ಬೇರೆ ವೃತ್ತಿಯಲ್ಲಿ ಬದುಕಲು ನಿಶ್ಚಯಿಸಿ ಕೆಲಸ ಹುಡುಕುತ್ತ ಊರೆಲ್ಲಾ ತಿರುಗಾಡಿದನು. ಕಡಗೆ ನಾಗರಾಜನೆಂಬ ವರ್ತಕನು ರಾಮನನ್ನು ಕಾವಲುಗಾರನನ್ನಾಗಿ ಇಟ್ಟುಕೊಂಡನು. ಅಲ್ಲಿ ರಾಮನು ಆರು ತಿಂಗಳು ಕೆಲಸಮಾಡಿದನು.

ನಾಗರಾಜನ ಹತ್ತಿರ ಎರಡು ಬೆಲೆಬಾಳುವ ರತ್ನಗಳಿದ್ದುವು. ದೂರದ ಒಂದು ದೇಶದಲ್ಲಿ ಅಂತಹ ರತ್ನಗಳಿಗೆ ಗಿರಾಕಿ ಬಂದಿತ್ತು. ಅಂತಹುದೇ ಬೇರೆ ನಾಲ್ಕು ರತ್ನಗಳು ಭೀಮಭಂಡಾರಿಯ ಹತ್ತಿರವೂ ಇದ್ದುವು. ಈ ಸಂಗತಿ ತಿಳಿದಿದ್ದ ನಾಗರಾಜನು ಆರು ರತ್ನಗಳನ್ನೂ ದೂರದ ಆ ದೇಶಕ್ಕೆ ಕಳುಹಿಸಿದರೆ ಒಳ್ಳೆಯ ಬೆಲೆ ಬಂದುಬಿಡುತ್ತದೆ. ನಾಗರಾಜನು ಭೀಮಭಂಡಾರಿಯ ಹತ್ತಿರ ಕೇಳಿದರೆ ಆ ರತ್ನಗಳನ್ನು ಅಗ್ಗಕ್ಕೆ ಕೊಡಲಾರನು. ಆದುದರಿಂದ ಭೀಮಭಂಡಾರಿಯ ಹತ್ತಿರವಿರುವ ರತ್ನಗಳನ್ನು ಅಪಹರಿಸಿಬಿಡುವುದೇ ಒಳ್ಳೆಯ ದಾರಿಯೆಂದು ನಾಗರಾಜನಿಗೆ ತೋರಿತು.

ಅಂತಲೇ ಅವನು ರಾಮನನ್ನು ರಹಸ್ಯವಾಗಿ ಕರೆದು, ಭೀಮಭಂಡಾರಿಯ ಮನೆಯ ರಹಸ್ಯಗಳನ್ನು ಅವನಿಗೆ ತಿಳಿಸಿ, ಅವನ ಪೆಟ್ಟಿಗೆಯ ಅರೆಯಲ್ಲಿರುವ ನಾಲ್ಕು ರತ್ನಗಳನ್ನು ಮಾತ್ರ ಕದ್ದು ತಂದುಕೊಟ್ಟರೆ, ಕೈತುಂಬ ಬಹುಮಾನ ಕೊಡುವೆನೆಂದು ಹೇಳಿದನು.

ಅಯ್ಯಾ, ನನ್ನದು ನಿಜಕ್ಕೂ ಕಳ್ಳತನದ ಕುಟುಂಬವೇ. ನನ್ನ ತಂದೆಗೆ ಕಳ್ಳತನವೇ ಮುಖ್ಯ ವೃತ್ತಿ. ನನಗೆ ಆ ವೃತ್ತಿಗೆ ಇಳಿಯಲು ಇಷ್ಟವಿಲ್ಲದೆ ನಿಮ್ಮ ಹತ್ತಿರ ಬಂದು ಈ ಕಾವಲಿನ ಕೆಲಸಕ್ಕೆ ಸೇರಿಕೊಂಡಿದ್ದೇನೆ. ಇಷ್ಟು ಕಾಲ ವಿಶ್ವಾಸಪಾತ್ರನಾಗಿ ಇಲ್ಲಿ ಕೆಲಸಮಾಡಿದ ಮೇಲೆ, ಈಗ ನೀವು ನನ್ನನ್ನು ಕಳ್ಳತನ ಮಾಡಬೇಕೆಂದು ಹೇಳುವಿರಲ್ಲ? ನನ್ನಿಂದಾಗದು ಕ್ಷಮಿಸಿರಿ" ಎಂದನು ರಾಮು. ಅದನ್ನು ಕೇಳಿ ನಾಗರಾಜನು ಆಶ್ಚರ್ಯವನ್ನೂ

ಇ. ಭವಾನಿಶಂಕರ

ಸಿಟ್ಟನ್ನೂ ಪ್ರಕಟಿಸುತ್ತ, "ಏನೇನು? ನಿನ್ನದು ಕಳ್ಳರ ವಂಶವೇ? ಈ ಮಾತನ್ನು ಇಲ್ಲಿ ಕೆಲಸಕ್ಕೆ ಸೇರುವಾಗ ಹೇಳದೆ, ಈಗ ಹೇಳುವಿಯಾ? ಇನ್ನೊಂದು ಕ್ಷಣವೂ ಇಲ್ಲಿರಬೇಡ. ನಡೆ." ಎಂದು ಹೇಳಿಬಿಟ್ಟನು.

ರಾಮನು ಆ ಕೆಲಸಬಿಟ್ಟು ಹೋಗಿಬಿಟ್ಟನು. ಈ ಘಟನೆ ನಡೆದ ಮಾರಣೇ ದಿನ ಭೀಮಭಂಡಾರಿ ನಾಗರಾಜನ ಬಳಿಗೆಬಂದು, "ನೋಡಯ್ಯಾ, ನಾಗ ರಾಜಾ, ನಾನು ಒಂದು ತಿಂಗಳವರೆಗೆ ವ್ಯಾಪಾರದ ಮೇಲೆ ಬೇರೆ ಊರಿಗೆ ಹೋಗಬೇಕಾಗಿದೆ. ಊರೊಳಗೆ ಅಲ್ಲಿ ಇಲ್ಲಿ ಕಳ್ಳತನಗಳು ನಡೆಯುತ್ತ ವಂತೆ. ಈ ನಾಲ್ಕು ರತ್ನಗಳನ್ನು ನಿನ್ನ ಹತ್ತಿರ ಕೊಟ್ಟಿರುತ್ತೇನೆ. ಭದ್ರವಾಗಿಟ್ಟುಕೊಂಡು ನಾನು ಹಿಂದಿರುಗಿ ಬಂದ ಮೇಲೆ ಕೊಟ್ಟುಬಿಡು" ಎಂದು ಅದೇ ನಾಲ್ಕು ರತ್ನಗಳನ್ನು ನಾಗರಾಜನಿಗೆ ಕೊಟ್ಟು ಹೊರಟುಹೋದನು.

ತರುವಾಯ ಕೆಲವು ದಿನಗಳು ಕಳೆದುವು. ಭೀಮ ಭಂಡಾರಿ ನಾಗರಾಜನ ಬಳಿಗೆ ಹಿಂದಿರುಗಿ ಬಂದು, ತಾನು ಕೊಟ್ಟ ರತ್ನಗಳನ್ನು ತನಗೆ ವಾಪಸು ಕೊಡು ವಂತೆ ಕೇಳಿದನು.

ನಾಗರಾಜನು ಸ್ವಲ್ಪವೂ ಹಿಂಜರಿಯದೆ, "ನೀವು ನನಗೆ ರತ್ನಗಳನ್ನು, ಅದೂ ಒಂದಲ್ಲ ಎರಡಲ್ಲ ನಾಲ್ಕು ರತ್ನಗಳನ್ನು ಯಾವಾಗ ಕೊಟ್ಟಿರಿ? ಹಾಗಿದ್ದರೆ ನನ್ನ ಕೈಯಿಂದ ಕಾಗದಚೂರು ಏನಾದರೂ ಪಡೆದಿರ ಬೇಕಲ್ಲ ನೀವು? ಅದೇನಾದರೂ ಇದ್ದರೆ ತೋರಿಸಿರಿ ನೋಡುವಾ" ಎಂದನು.

ಭೀಮಭಂಡಾರಿ ನಾಗರಾಜನನ್ನು ಚುರುಗುಟ್ಟಿ ನೋಡುತ್ತ, "ಏನೋ ಅಂದುಕೊಂಡೆ. ನಿನ್ನ ಬುದ್ಧಿ ಹೀಗಿದೆಯೆಂದು ರಾಮನು ಹೇಳಿದರೆ ನಾನು ನಂಬಲಿಲ್ಲ. ನಿಜ ಸಂಗತಿ ತಿಳಿದುಕೊಳ್ಳುವಾ ಅಂತಲೇ ಆ ರತ್ನಗಳನ್ನು ನಿನಗೆ ತಂದುಕೊಟ್ಟೆ. ಅವುಗಳು ಈಗ ನಿಜವಾಗಿಯೂ ನಿನ್ನ ಹತ್ತಿರ ಇಲ್ಲವೆಂಬುದು ನನಗೆ ಮೊದಲೇ ಗೊತ್ತು. ನಿನಗೆ ಇನ್ನೂ ಗೊತ್ತಾದ ಹಾಗೆ ಕಾಣುವುದಿಲ್ಲ. ಆ ರಾಮನೇ ಅವುಗಳನ್ನು ನಿನ್ನ ಮನೆಯಿಂದ ನಿನಗೆ ಗೊತ್ತಾಗದ ಹಾಗೆ ತಂದು ಯಾವಾಗಲೋ ನನಗೆ ಕೊಟ್ಟಿದ್ದಾನೆ, ಇಕೋ ನೋಡು!" ಎಂದು ತನ್ನ ಜೇಬಿನಿಂದ ಅದೇ ನಾಲ್ಕು ರತ್ನಗಳನ್ನೂ ತೆಗೆದು ತೋರಿಸಿ, "ನೀನು ಎಂಥವ ನೆಂದು ಸ್ಪಷ್ಟವಾಗಿ ತಿಳಿಯಿತು. ನಿನ್ನನ್ನು ಕುರಿತು ತಿಳಿದುಕೊಳ್ಳಬೇಕಾದವರಿಗೆಲ್ಲ ಹೇಳುತ್ತೇನೆ. ನಿನ್ನ ವಿಷಯದಲ್ಲಿ ಎಲ್ಲರೂ ಎಚ್ಚರದಲ್ಲಿರುವಂತೆ ಮಾಡ ಬೇಕಾಯಿತು" ಎಂದು ಹೇಳಿ ಹೊರಟುಹೋದನು.

ಭೀಮಭಂಡಾರಿ ಕಳ್ಳನ ಮಗ ರಾಮನಿಗೆ ಒಳ್ಳೆಯ ಸಂಬಳ ಕೊಡುತ್ತ ತನ್ನ ಮನೆಯಲ್ಲಿಯೇ ಕಾವಲು ಗಾರಿಕೆಗೆ ಇರಿಸಿಕೊಂಡನು.



# ಕೆಟ್ಟ ಬಾಯಿಗೆ ತಕ್ಕ ರಸ

ಶ್ರೀಮಂತಳಾದ ಶೇಷಮ್ಮನಿಗೆ ನೆರೆಯವಳಾದ ಶ್ರೀಮಂತೆ ಪಾರಮ್ಮನನ್ನು ಕಂಡರಾಗದು. ಅವರಿಬ್ಬರಿಗೂ ಬೇಕಾದವಳಾಗಿ ಮೂರನೇ ಮನೆಯ ನೀರದಮ್ಮನು, ಬಡವಳಾದುದರಿಂದ ಇಬ್ಬರಿಗೂ ಸಹಾಯಕಳಾಗಿಯೂ ಇದ್ದಳು. ಒಂದುದಿನ ಪಾರಮ್ಮ ದನ ಕೊಂಡುಕೊಳ್ಳಲು ಸ್ವತಃ ಸಂತೆಗೆ ಹೋದಳೆಂದು ನೀರದಮ್ಮನಿಂದ ತಿಳಿದು ಶೇಷಮ್ಮ, "ಅವಳೇನು ದನ ಕೊಂಡುಕೊಂಡಾಳು ಮೂದೇವೀ ! ಕೈಲಿದ್ದ ಹಣವೆಲ್ಲಾ ಕಳೆದುಕೊಂಡು ಬರುತ್ತಾಳೆ !" ಎಂದಳು. ತಾನು ಹೇಳಿದಂತೆಯೇ ಆಗಲೆಂಬುದು ಶೇಷಮ್ಮನ ಆಶೆ.

ಸಾಯಂಕಾಲ ಪಾರಮ್ಮ ಬರಿಗೈಯಿಂದ ಬರುವುದನ್ನು ನೋಡಿ ಶೇಷಮ್ಮನಿಗೆ ಸಮಾಧಾನವಾಯಿತು. ಸ್ವಲ್ಪ ಹೊತ್ತಿಗೆ ನೀರದಮ್ಮ ಶೇಷಮ್ಮನ ಬಳಿಗೆ ಬಂದಳು.

"ನೋಡಿದ್ಯಾ ನೀರದಾ? ಆ ಪಾರು ನಾನಂದುಕೊಂಡ ಹಾಗೇ ಹಣವಷ್ಟೂ ಕಳೆದುಕೊಂಡು ಬಂದಿದ್ದಾಳೆ ! ಇನ್ನು ಅವಳ ಗಂಡ......" ಎನ್ನುವಷ್ಟರಲ್ಲಿ ನೀರದಮ್ಮ "ಹಾಗಿಲ್ಲ ಶೇಷಮ್ಮಾ ! ಪಾರಮ್ಮ ಆರು ನೂರು ರೂಪಾಯಿ ಕೊಟ್ಟು ದನ ತೆಕ್ಕೊಂಡು ಬರುವಾಗ, ಪಕ್ಕದ ಊರಿನ ಸಾವುಕಾರ್ರು ಅದನ್ನು ನೋಡಿ, ಬಿಡಲು ಮನಸ್ಸು ಬಾರದೆ ಸಾವಿರ ರೂಪಾಯಿಗೆ ಆ ದನವನ್ನು ತನಗೇ ಕೊಡುವಂತೆ ಕೇಳಿದರಂತೆ. ನಾನ್ನೂರು ರೂಪಾಯಿ ಲಾಭ ಏಕೆ ಬಿಡಬೇಕೆಂದು ಪಾರಮ್ಮ ಅವರಿಗೇ ದನವನ್ನು ಕೊಟ್ಟು ಸಾವಿರ ರೂಪಾಯಿ ಯೊಂದಿಗೆ ಬಂದಿದ್ದಾಳೆ. ಅದೃಷ್ಟ ಒತ್ತಾಯಮಾಡಿಕೊಡುವುದೆಂದರೆ ಅದೇ ನೋಡಿ!" ಎಂದುದನ್ನು ಕೇಳಿ ಶೇಷಮ್ಮನ ಬಾಯಿಗೆ ಬೇವಿನರಸ ಇಳಿದ ಹಾಗಾಯಿತು !





# ಅಳಿಯಂದಿರ ಜೋಡಿ

ಒಂದು ಊರಿನಲ್ಲಿ ರಾಮರಾಜನೆಂಬವನು ಸಾಧಾರಣ ಬಡ ರೈತನಾಗಿದ್ದು ಕುಟುಂಬ ನಡೆಸುತ್ತ, ತನ್ನ ಇಬ್ಬರು ಹೆಣ್ಣು ಮಕ್ಕಳಿಗೆ ಮದುವೆ ಮಾಡಿದ ಮೇಲೆ, ಪೆಟ್ಟಿಗೆಯುಲ್ಲಿದ್ದುದೆಲ್ಲಾ ಖಾಲಿಯಾಗಿ ಕೇವಲ ಬರಿಗೈಯವನಾದನು. ಮಾರುದ್ದದ ಗದ್ದೆಯೂ, ಒಂದು ಗಾಡಿಯೂ, ಎತ್ತುಗಳೂ ಉಳಿದುಕೊಂಡಿದ್ದುವು.

ಇಬ್ಬರು ಮಗಳಂದಿರ ಮದುವೆಗಳೂ ಹತ್ತಿರ ಹತ್ತಿರ ಹದಿನೈದು ದಿನಗಳ ಅಂತರದಲ್ಲೇ ಆಗಿದ್ದುವು. ಅದಾಗಿ ಆರು ತಿಂಗಳಿಗೆ ಸಂಕ್ರಾಂತಿ ಹಬ್ಬ ಬಂತು. ಹೊಸತಾಗಿ ಮದುವೆಯಾದ ದಂಪತಿಗಳಿಗೆ ಅದು ಮೊದಲನೇ ಹಬ್ಬ. ಆದುದರಿಂದ ಹಬ್ಬಕ್ಕೆ ಮಗಳಂದಿರನ್ನೂ ಅಳಿಯಂದಿರನ್ನೂ ಆಹ್ವಾನಿಸಬೇಕೆಂದು ರಾಮರಾಜನ ಹೆಂಡತಿ ಗಂಡನೊಂದಿಗೆ ಹೇಳಿದಳು. ರಾಮರಾಜನು ಸುಮ್ಮನೆ ತಲೆಯಾಡಿಸಿದನು. ತನ್ನ ಆರ್ಥಿಕ ಸ್ಥಿತಿಯು ಚೀಲ ಬರಿದಾಗಿರುವುದನ್ನು ಹೆಂಡತಿಯೊಡನೆ ಹೇಳಲಿಕ್ಕೂ ಅವನ ಅಭಿಮಾನ ಬಿಡಲಿಲ್ಲ. ಅಳಿಯಂದಿರನ್ನು ಆಹ್ವಾನಿಸಲೂ ಇಲ್ಲ.

ಆದರೆ ಅತ್ತೆಯ ಮನೆಯಲ್ಲಿದ್ದ ಚಿಕ್ಕವಳು ಹಬ್ಬ ಹತ್ತಿರವಾಗುತ್ತಿರಲು ತೌರು ಮನೆಯ ಆಕರ್ಷಣೆಗೊಳಗಾಗಿ ತನ್ನ ಗಂಡನೊಂದಿಗೆ, "ಹಬ್ಬಕ್ಕೆ ನಿಮ್ಮ ಮಾವನಲ್ಲಿಗೆ ಹೋಗೋಣ" ಎಂದಳು.

"ನಿನ್ನ ತಂದೆ ಕರೆಯಲಿಲ್ಲ ಏನಿಲ್ಲ. ಸುಮ್ಮನೆ ಹೋಗುತ್ತಾರೇನು ?" ಎಂದನು ಚಿಕ್ಕ ಅಳಿಯ.

"ನಮ್ಮನ್ನು ಕರೀಬೇಕೇನು? ಅದು ನಮ್ಮ ಮನೇ ಹಾಗೇನೇ. ಹೋಗೋಣ ನಡೆಯಿರಿ" ಎಂದು ಗಂಡನನ್ನು ಒತ್ತಾಯಿಸಿ ಒಪ್ಪಿಸಿದಳು ಚಿಕ್ಕವಳು.

ಹಾಗೆಯೇ ರಾಮರಾಜನ ದೊಡ್ಡ ಮಗಳು ಕೂಡಾ ತನ್ನ ಗಂಡನನ್ನು ಒತ್ತಾಯಪಡಿಸಿದಳು. "ನಮ್ಮ ಅಪ್ಪ ಚಿಕ್ಕ ಅಳಿಯನಿಗೆ ಹಬ್ಬದ ಕಾಣಿಕೆಗಳನ್ನು ಕೊಡುತ್ತಾರೆ ಅಂದುಕೊಳ್ಳಿ. ಅಂಥಾದ್ದು ನಿಮಗೂ ದಕ್ಕದೆ ಹೋದರೆ ನನಗೆಷ್ಟು ಅವಮಾನ! ಅವಳು ಹೋಗುತ್ತಾಳಂತೆ! ನಾವೂ ಹೋಗಲೇ ಬೇಕು" ಎಂದು ಹೇಳಿದ ಹೆಂಡತಿಯ ಮಾತು ಕೇಳಿ, ಅಭಿಮಾನವು ಮೇಲೆದ್ದು ದೊಡ್ಡ ಅಳಿಯ ತನ್ನ ಹೆಂಡತಿಯೊಂದಿಗೆ ಹೊರಟನು.

ತಾನು ಆಹ್ವಾನಿಸದಿದ್ದರೂ, ಏನೋ ಒತ್ತಾಯಪಡಿಸಿ ಆಹ್ವಾನಿಸಿದ ಹಾಗೆ ಮಗಳಂದಿರೂ, ಅಳಿಯಂದಿರೂ ಮನೆಗೆ ಬಂದುದನ್ನು ನೋಡಿ

ಎಂ. ವಿ. ಎಸ್. ನಾರಾಯಣ

ರಾಮರಾಜನಿಗೆ ಅತ್ಯಾಶ್ಚರ್ಯವಾಯಿತು. ಅವನ ಹೆಂಡತಿ ಮಾತ್ರ, ಗಂಡನು ತನ್ನ ಮಾತನ್ನು ತಳ್ಳಿ ಹಾಕದೆ ಅವರನ್ನು ಕರೆಯಿಸಿರುವನೆಂದುಕೊಂಡು ಆತ್ಮಾನಂದದಿಂದ ಉಕ್ಕಿದಳು.

ಹಬ್ಬದ ದಿನದ ಊಟ ವಿಶೇಷವಾಗಿತ್ತೇ ಹೊರತು, ರಾಮರಾಜನು ಅಳಿಯಂದಿರಿಗೆ ಕಾಣಿಕೆಯೋ ಉಡುಗೊರೆಯೋ ಕೊಡುವಂಥ ಸೂಚನೆ ಯಾವುದೂ ಕಾಣಿಸಲಿಲ್ಲ. ಅದನ್ನು ನೋಡಿ ಅಳಿಯಂದಿರಿಬ್ಬರೂ ಒಂದೇ ಬಗೆಯ ಆಪೋಹ ಅನುಮಾನಗಳಿಗೆ ಗುರಿಯಾದರು. ಮಾಮಯ್ಯ ಒಬ್ಬರಿಗೆ ತಿಳಿಯದಂತೆ ಇನ್ನೊಬ್ಬರಿಗೆ ಏನೋ ಉಡುಗೊರೆ ಕೊಡುವ ಪ್ರಯತ್ನದಲ್ಲಿದ್ದಾರೆ ಎಂದು ಅವರಿಗೆ ತೋರಿತು. ಅದಕ್ಕೆ ತಕ್ಕಹಾಗೆ ರಾಮರಾಜನು ಮಗಳೂ ಅಳಿಯಂದಿರೂ ಹೊರಟು ಹೋಗಲಿರುವ ದಿನ, ಯಾರಿಗೂ ಕಾಣದಂತೆ ಎಲ್ಲಿಗೋ ಹೊರಟುಹೋಗಿ ಬಿಟ್ಟಿದ್ದನು. ದೊಡ್ಡ ಮಗಳು ಏಕಾಂತದಲ್ಲಿ ತಾಯಿಯನ್ನು ನೋಡಿ, ತನ್ನ ಗಂಡನಿಗೆ ಉಡುಗೊರೆ ಕೊಡುವ ವಿಷಯವನ್ನು ಕುರಿತು ವಿಚಾರಿಸಿದಳು.

ತಾಯಿ ಮೇಲೆ ಕೆಳಗೆ ನೋಡುತ್ತ, "ನಿಮ್ಮ ಅಪ್ಪ ಮನೆಗೆ ಬಂದುಬಿದ್ದ ಧಾನ್ಯವನ್ನೆಲ್ಲಾ ಮಾರಿ ನಿನ್ನ ಮದುವೆಗಾದ ಸಾಲ ತೀರಿಸಿ ಏನಾದರೂ ಉಳಿದಿದ್ದರೆ ಉಡುಗೊರೆ ಕೊಡಬೇಕೆಂದು ಹೇಳು ತ್ತಿದ್ದರು. ಮತ್ತೇನೂ ಗೊತ್ತಾಗಿಲ್ಲ" ಎಂದಳು.

ಈ ಮಾತುಗಳು ಮರೆಯಲ್ಲಿದ್ದ ಚಿಕ್ಕವಳ ಕಿವಿಗೂ ಅರ್ಧಂಬರ್ಧವಾಗಿ ಬಿದ್ದಿತು. ಅವಳು ಕೂಡಾ ಅವಸರವಸರವಾಗಿ ತಾಯಿಯ ಬಳಿಗೆ ಬಂದು, "ಹೊರಡಲಿಕ್ಕೆ ವೇಳೆ ಸಮೀಪಿಸುತ್ತಾ ಇದೆ ಯಲ್ಲಮ್ಮಾ? ಉಡುಗೊರೆ ವಿಷಯ ಮರೆತಿ ರೇನು?" ಎಂದು ಕೇಳಿದಳು.

"ನಿಮ್ಮ ಅಪ್ಪ ಎತ್ತುಗಳನ್ನು ಮಾರಿ ನಿನ್ನ ಮದುವೆಗಾದ ಸಾಲವನ್ನೆಲ್ಲಾ ತೀರಿಸಿ ಉಳಿದಿದ್ದರೆ ನೋಡಿ ಉಡುಗೊರೆ ಕೊಡಬೇಕು ಅನ್ನುತ್ತಿದ್ದರು. ಅಷ್ಟೇ ನನಗ್ಗೊತ್ತು" ಎಂದಳು ತಾಯಿ.



ಈ ಸಮಾಚಾರ ತಮ್ಮ ತಮ್ಮ ಹೆಂಡತಿಯರಿಂದಾಗಿ ಅಳಿಯಂದಿರಿಗೂ ಗೊತ್ತಾಯಿತು. ಕೂಡಲೇ ದೊಡ್ಡ ಅಳಿಯನು ಗಾಡಿಗೆ ಎತ್ತುಗಳನ್ನು ಹೂಡಿ, ಧಾನ್ಯದ ಚೀಲಗಳನ್ನು ಅದರಲ್ಲಿ ಹಾಕಿಕೊಂಡು ಸಂತೆಯ ಕಡೆಗೆ ಹೊರಟನು. ಅವನ್ನು ನೋಡಿ ಚಿಕ್ಕ ಅಳಿಯ ಓಡೋಡಿ ಬಂದು ಅದೇ ಗಾಡಿಯಲ್ಲಿ ಏರಿಕೊಂಡನು.

ಅವರೊಂದಿಗೆ ಆ ಗಾಡಿ ಸಂತೆಗೆ ಹೋಯಿತು. ದೊಡ್ಡ ಅಳಿಯನು ಧಾನ್ಯವನ್ನು ಮಾರಾಟ ಮಾಡಲು ಒಂದು ಕಡೆಗೂ, ಸಣ್ಣ ಅಳಿಯನು ಎತ್ತುಗಳನ್ನು ತೆಗೆದುಕೊಂಡು ಮಾರಲು ಇನ್ನೊಂದು ಕಡೆಗೂ ಹೊರಟರು. ಇಬ್ಬರಿಗೂ ಮಾರಾಟದ ವ್ಯವಹಾರ ತಿಳಿಯದು.

ಧಾನ್ಯವನ್ನು ಕೊಂಡುಕೊಳ್ಳಬೇಕೆಂದಿದ್ದ ಅನೇಕ ವರ್ತಕರು ದೊಡ್ಡ ಅಳಿಯನ ಸುತ್ತಲೂ ಸೇರಿ ಧಾನ್ಯದ ಬೆಲೆಯನ್ನು ಕೇಳಿದರು.

ದೊಡ್ಡ ಅಳಿಯನು ಏನೋ ಗುಣಿಸಿಕೊಂಡು ಬಾಯಿಗೆ ಬಂದ ಬೆಲೆ ಹೇಳಿದನು. ವರ್ತಕರು ಗಹಗಹಿಸಿ ನಕ್ಕುಬಿಟ್ಟರು. ಅವನು ಹೇಳಿದುದು ಚಿಲ್ಲರೆಯಾಗಿ ಮಾರುವ ಬೆಲೆಯನ್ನು. ಆದರೆ ವರ್ತಕರು ಏಕೆ ನಕ್ಕರೆಂದು ತಿಳಿಯದೆ, "ನಗಲಿಕ್ಕೇನಾಯಿತು ? ನೀವು ಧಾನ್ಯವನ್ನು ಯಾವ ದರಕ್ಕೆ ಕೊಂಡುಕೊಳ್ತೀರಿ?" ಎಂದು ಕೇಳಿದನು. ಅವನು ಈ ಧಾನ್ಯವನ್ನು ಎಲ್ಲಿಂದಲೋ ಕದ್ದು ತಂದಿರಬೇಕೆಂದು ಅವರಿಗೆಲ್ಲಾ ಅನುಮಾನವಾಗಿ, ಅವನನ್ನು ರಕ್ಷಕಭಟರ ವಶಕ್ಕೆ ಒಪ್ಪಿಸಿ ಬಿಟ್ಟರು.

ಸಣ್ಣ ಅಳಿಯನಿಗೆ ಕೂಡಾ ಅದೇ ಗತಿಯಾಯಿತು. ಎತ್ತನ್ನು ಕೊಂಡುಕೊಳ್ಳುವ ಗಿರಾಕಿಗಳು ಬಂದು ವಿಚಾರಿಸಿದಾಗ ಎಷ್ಟು ಬೆಲೆ ಹೇಳಬೇಕೆಂದು ತಿಳಿಯದೆ, ಪಕ್ಕದಲ್ಲಿದ್ದ ತುಪ್ಪದ ವ್ಯಾಪಾರಿಯ ಹತ್ತಿರ ಆಲೋಚನೆ ಕೇಳಿದನು. ಕೂಡಲೇ ಅಲ್ಲಿದ್ದವರಿಗೆಲ್ಲ ಅನುಮಾನವಾಗಿ, ಎತ್ತುಗಳನ್ನು ಎಲ್ಲಿಂದಲೋ ಕದ್ದುತಂದು ಮಾರಲು ನೋಡುವನೆಂದುಕೊಂಡು, ಅವನನ್ನೂ ರಕ್ಷಕಭಟರಿಗೆ ಒಪ್ಪಿಸಿದರು.

ತನ್ನ ಅಳಿಯಂದಿರು ಮಾಡಿದ ಮಹಾ ಕಾರ್ಯಗಳು ರಾಮರಾಜನಿಗೆ ಗೊತ್ತಾಯಿತು. ಅವರನ್ನು ರಕ್ಷಕಭಟರ ಕೈಯಿಂದ ಬಿಡಿಸಿಕೊಂಡು ಬರಲು, ಅವರು ಕೇಳುವ ಪ್ರಶ್ನೆಗಳಿಗೆಲ್ಲ ಉತ್ತರ ಕೊಟ್ಟು, ಅವರ ಕೈ ಬೆಚ್ಚಗೆ ಮಾಡಿ ಇದ್ದುದನ್ನೆಲ್ಲಾ ಖಾಲಿ ಮಾಡಿಕೊಳ್ಳಬೇಕಾಯಿತು. ಅವನು ಅಳಿಯಂದಿರಿಗೇನಾದರೂ ಉಡುಗೊರೆ ಕೊಡುವ ಏರ್ಪಾಡು ಮಾಡಲು ಸಾಲ ತರಲಿಕ್ಕಾಗಿ ಪಕ್ಕದ ಗ್ರಾಮಕ್ಕೆ ಹೋಗಿದ್ದನು. ಆ ಹಣವಷ್ಟೂ ರಕ್ಷಕಭಟರಿಂದ ಅಳಿಯಂದಿರನ್ನು ಬಿಡಿಸಿಕೊಳ್ಳುವುದಕ್ಕಾಯಿತು.





# ಸ್ವರ್ಣಪಾತ್ರ

ಐದು ಕಲ್ಪಗಳಿಗೆ ಹಿಂದೆ ಬೋಧಿಸತ್ವನು ಸೇರಿವಾ ಎಂಬ ರಾಷ್ಟ್ರದಲ್ಲಿ ಪಾತ್ರ ಸಾಮಾನುಗಳನ್ನು ಮಾರುವ ವರ್ತಕನಾಗಿ ಬದುಕಿಕೊಂಡಿದ್ದನು. ಅವನು ಊರ ಜನರ ಹಳೆಯ ಪಾತ್ರಗಳನ್ನು ತೆಗೆದುಕೊಂಡು, ಅವುಗಳ ಬದಲಿಗೆ ಹೊಸ ಪಾತ್ರವನ್ನು ಕೊಡುತ್ತಿದ್ದನು.

ಅದೇ ಊರಿನಲ್ಲಿ ಪಾತ್ರ ಸಾಮಾನುಗಳ ಕ್ರಯವಿಕ್ರಯಗಳನ್ನು ನಡೆಸುವ ಇನ್ನೊಬ್ಬ ವ್ಯಾಪಾರಿಯೂ ಇದ್ದನು. ಅವನು ತುಂಬಾ ಲೋಭಿಯೂ ಆಶೆಬುರುಕನೂ ಆಗಿದ್ದನು.

ಒಂದುಸಾರಿ ಅವರಿಬ್ಬರೂ ಕೂಡಿ ತೇಲಿವಾಹ ಎಂಬ ನದಿಯನ್ನು ದಾಟಿ ಆಂಧ್ರಪುರವೆಂಬ ಊರನ್ನು ತಲಪಿದರು. ಒಬ್ಬರ ವ್ಯಾಪಾರಕ್ಕೆ ಇನ್ನೊಬ್ಬರಿಂದ ತಡೆಯುಂಟಾಗಬಾರದೆಂದು, ಆ ಪುರದೊಳಗಿನ ಬೀದಿಗಳನ್ನು ಇಬ್ಬರೂ ಭಾಗಿಸಿಕೊಂಡು, ಅವರವರ ಬೀದಿಗಳಲ್ಲಿ ಇಬ್ಬರೂ ಹೊರಟರು.

ಆಂಧ್ರಪುರದೊಳಗೆ ಒಬ್ಬ ಶ್ರೇಷ್ಠಿಯ ಕುಟುಂಬವಿದ್ದಿತು. ಅವರು ಹಿಂದೆ ಧನಿಕರಾಗಿದ್ದು, ಈಗ ಬಡವರಾಗಿಬಿಟ್ಟಿದ್ದರು. ಆ ಕುಟುಂಬಕ್ಕೆ ಸೇರಿದ ಗಂಡುಮಕ್ಕಳೂ, ಅಣ್ಣತಮ್ಮಂದಿರೂ, ಇದ್ದ ಸಂಪತ್ತೂ ಹೋದ ಮೇಲೆ, ಒಬ್ಬಳು ಕನ್ಯೆಯೂ, ಒಬ್ಬಳು ತಾಯಿಯೂ ಕೇವಲ ಈ ದಾರಿದ್ರ್ಯವೂ ಉಳಿದಿತ್ತು.

ಅವರ ಮನೆಯಲ್ಲಿದ್ದ ಅನೇಕ ಪಾತ್ರೆಗಳು ಬಳಸುವವರಿಲ್ಲದೆ ಅವೆಲ್ಲಾ ಮೂಲೆಗೆ ಬಿದ್ದಿದ್ದುವು. ಅವುಗಳಲ್ಲಿ ಒಂದು ಬಂಗಾರದ ಪಾತ್ರವಾಗಿತ್ತು. ಅದೀಗ ಬಣ್ಣ ಕಳೆದುಕೊಂಡು ಯಾವುದೋ ಲೋಹಪಾತ್ರದಂತಿತ್ತು. ಅದು ಬಂಗಾರದ ಪಾತ್ರವೆಂಬ ಸಂಗತಿ ಹೆಣ್ಣುಗಳಿಬ್ಬರಿಗೂ ತಿಳಿಯದು.

ಲೋಭಿ ವರ್ತಕನು ಆ ಬೀದಿಗೇ ತನ್ನ ವ್ಯಾಪಾರದ ಕೂಗು ಹಾಕಿಕೊಂಡು ಬಂದನು. "ಹೊಸ ಪಾತ್ರೆಗಳು! ಹಳೇ ಪಾತ್ರೆಗಳಿಗೆ ಹೊಸವು ಬೇಕೇ?" ಎಂಬ ಅವನ ಕೂಗನ್ನು ಕೇಳಿ ಹುಡುಗಿ ತಾಯಿಯ ಹತ್ತಿರ, "ನನಗೊಂದು ತಟ್ಟೆ ತೆಗೆಸಿ ಕೊಡಮ್ಮಾ" ಎಂದಳು.

"ಏನು ಕೊಟ್ಟು ತೆಗೆದು ಕೊಡಲಿ ಹೇಳೇ? ನಮ್ಮ ಹತ್ತಿರ ಏನಿದೆ?" ಎಂದಳು ತಾಯಿ.

"ನಾವು ಉಪಯೋಗಿಸದ ಪಾತ್ರೆಗಳಷ್ಟು ಮೂಲೆಯಲ್ಲಿ ಬಿದ್ದಿವೆಯಲ್ಲಮ್ಮಾ? ಅವುಗಳಲ್ಲಿ

ಒಂದೆರಡನ್ನು ಕೊಟ್ಟರೆ ಏನಾದರೂ ಸಿಕ್ಕೀತು" ಎಂದಳು ಮಗಳು.

ತಾಯಿ ಲೋಭಿ ವರ್ತಕನನ್ನು ಕರೆದು ಕೂಡಿಸಿ ಅವನ ಕೈಗೊಂದು ಹಳೆಯ ಪಾತ್ರವನ್ನು ಕೊಟ್ಟು, "ಅಪ್ಪಾ, ಇದನ್ನು ತೆಗೆದುಕೊಂಡು ಈ ಹುಡುಗಿಗೆ ಇಷ್ಟವಾದ ಒಂದು ವಸ್ತು ಕೊಡುವಿಯಾ ?" ಎಂದು ಕೇಳಿದಳು.

ಲೋಭಿ ವರ್ತಕನು ಆ ಪಾತ್ರವನ್ನು ನೋಡಿದ ಕೂಡಲೇ ಅದು ಬಂಗಾರದ ಪಾತ್ರವೆಂಬುದನ್ನು ಕಂಡು ಹಿಡಿದು, ಅದನ್ನು ಹಾಗೆ ಹೀಗೆ ನೋಡಿ, ಕೌಚ ಹಾಕಿ ತಿರುಗಿಸಿ, ಕಡ್ಡಿಯಿಂದ ಗೀರಿ ದೃಢಪಡಿಸಿಕೊಂಡು, ಅದನ್ನು ಆದಷ್ಟು ಕಡಿಮೆಗೆ ವಶಪಡಿಸಿಕೊಳ್ಳುವ ಆಲೋಚನೆಯಿಂದ, "ಇದಕ್ಕೇನು ಬಂದೀತು ? ಹೋಗಿ ಹೋಗಿ ಈ ದರಿದ್ರ ವ್ಯಾಪಾರಕ್ಕೋ ಕರೆದಿರಿ ?" ಎಂದು ಬೇಸರಿಕೆ ನಟಿಸಿ ಆ ಪಾತ್ರವನ್ನು ಎತ್ತಿ ಮೂಲೆಗೆ ಬಿಸುಟು ಅಲ್ಲಿಂದ ಹೋಗಿಬಿಟ್ಟನು. ಮತ್ತೊಂದು ಸಾರಿ ಅಲ್ಲಿಗೆ ಬಂದು ಏನಾದರೂ ಹೊಸದಾದ ಚಿಕ್ಕ ವಸ್ತುವನ್ನೆಸೆದರೆ ಆ ಪಾತ್ರ ಕೊಟ್ಟುಬಿಡುವರೆಂದು ಅವನ ಭಾವನೆ.

ಬಿಸುಟ ಭರಕ್ಕೆ ಆ ಪಾತ್ರಕ್ಕೆ ಪೆಟ್ಟಾಗಿ ಸ್ವಲ್ಪ ಜಜ್ಜಿತು. ಅದನ್ನು ನೋಡಿ ಹುಡುಗಿ ಪಕ್ಕದ ಬೀದಿಯಲ್ಲಿರುವ ತನ್ನ ಗೆಳತಿಯ ಮನೆಯಲ್ಲಿರುವ ಸುತ್ತಿಗೆಯಿಂದ ಬಡಿದು ಸರಿಮಾಡಿ ತರುತ್ತೇನೆಂದು ಅದನ್ನು ಎತ್ತಿಕೊಂಡು ಹೊರಟಳು.

ಅವಳು ಆ ಬೀದಿಗೆ ಹೋದ ಕೂಡಲೇ, ಅಲ್ಲಿ ಕೂಗಿಕೊಂಡು ಹೋಗುವ ಬೋಧಿಸತ್ವನನ್ನು ನೋಡಿ, "ಅಯ್ಯಾ, ಈ ಹಳೇ ಪಾತ್ರಕ್ಕೆ ಹೊಸತೊಂದು ವಸ್ತು ಕೊಡುವಿರಾ ?" ಎಂದು ಕೇಳಿದಳು.

"ಯಾಕೆ ಕೊಡಲಾರೆನಮ್ಮಾ ? ಏನಿದ್ದರೂ ಕೊಂಡುಕೊಂಡು ಅದಕ್ಕೆ ತಕ್ಕದ್ದನ್ನು ಕೊಡುತ್ತೇನೆ. ಎಲ್ಲಿ ನಿನ್ನ ಮನೆ ?" ಎಂದನು ಬೋಧಿಸತ್ವ.

"ಈ ಪಾತ್ರ ಸ್ವಲ್ಪ ಜಜ್ಜಿದೆ. ಸರಿಮಾಡಿ ತರುತ್ತೇನೆ" ಎಂದಳು ಹುಡುಗಿ.



"ಅದೆಲ್ಲಾ ನಾನು ನೋಡಿಕೊಳ್ಳುತ್ತೇನಮ್ಮಾ. ನಿನ್ನ ಮನೆಗೆ ನಡಿ" ಎಂದನು ಬೋಧಿಸತ್ವ.

ಹುಡುಗಿ ಅವನನ್ನು ಮನೆಗೆ ಕರೆದು ತಂದು, "ಅಮ್ಮಾ. ಈ ವರ್ತಕರು ತುಂಬಾ ಒಳ್ಳೆಯವರಾಗಿದ್ದಾರೆ. ಇವರು ಈ ಪಾತ್ರವನ್ನು ತೆಗೆದುಕೊಳ್ಳುತ್ತಾರಂತೆ" ಎಂದಳು.

"ಏನು ಕೊಂಡುಕೊಳ್ಳುತ್ತಾನೋ ಏನು ಮಣ್ಣೋ ? ಆ ವರ್ತಕನ ಹಾಗೆ ಇವನೂ ಸಿಟ್ಟಿನಿಂದ ಮುಖಕ್ಕೆ ಬಿಸುಡುತ್ತಾನೋ ಏನೋ! ನೋಡಪ್ಪಾ, ಬೇಡದಿದ್ದರೆ ಒಳ್ಳೇದರಲ್ಲೇ ಬಿಟ್ಟು ಹೋಗಪ್ಪಾ" ಎಂದಳು ತಾಯಿ.

ಬೋಧಿಸತ್ವನು ಆ ಪಾತ್ರವನ್ನು ನೋಡಿ ಬಂಗಾರದ ಪಾತ್ರವೆಂದು ತಿಳಿದು. "ಅಮ್ಮಾ. ಇದು ಸಾಧಾರಣದ ಬಂಗಾರದ ಪಾತ್ರವಲ್ಲ. ಉತ್ತಮವಾದ ಸ್ವರ್ಣಪಾತ್ರ. ಒಂದು ಲಕ್ಷ ಬೆಲೆ ಬರುತ್ತೆ. ಇದಕ್ಕೆ ಸಮಾನವಾದ ವಸ್ತುಗಳು ನನ್ನ ಹತ್ತಿರ ಇಲ್ಲ" ಎಂದನು.

"ಮತ್ತೆ ಇನ್ನೊಬ್ಬ ವರ್ತಕನು ಇದನ್ನು ನೋಡಿ ಚಿಕ್ಕಾಸಿಗೂ ಬಾರದೆಂದು ಹೇಳಿ ಬಿಸುಟು ಹೋದ. ನಿನಗೆ ಇದು ಬಂಗಾರವಾದರೆ ತೆಗೆದುಕೊಂಡು, ಈ ಹುಡುಗಿಗೆ ಯಾವುದು ಬೇಕೋ ಅದನ್ನೊಂದು ಕೊಟ್ಟುಬಿಡು" ಎಂದಳು ತಾಯಿ.

ಬೋಧಿಸತ್ವನು ತನ್ನ ಬಳಿಯಲ್ಲಿದ್ದ ಐನೂರು ಬೆಳ್ಳಿಯ ನಾಣ್ಯಗಳನ್ನೂ, ಐನೂರು ರೂಪಾಯಿ ಬೆಲೆಯ ಹೊಸ ಬಗೆಯ ಪಾತ್ರ ಸಾಮಗ್ರಿಗಳನ್ನೂ ಆ ತಾಯಿ ಮಗಳಿಗೆ ಕೊಟ್ಟು, "ಅಮ್ಮಾ, ನನ್ನ ಹತ್ತಿರ ಇನ್ನು ಈ ತಕ್ಕಡಿಯೂ, ಎಂಟು ಬೆಳ್ಳಿ ನಾಣ್ಯಗಳೂ ಮಾತ್ರವೇ ಇವೆ. ಉಳಿದದ್ದೆಲ್ಲಾ ನಿಮಗೆ ಕೊಟ್ಟಿದ್ದೇನೆ. ತೆಗೆದುಕೊಳ್ಳಿ" ಎಂದು ಹೇಳಿ ಸ್ವರ್ಣ ಪಾತ್ರವನ್ನು ತೆಗೆದುಕೊಂಡು ಹೊರಟು ಹೋದನು.

ಅವನು ಇಟ್ಟುಕೊಂಡ ಎಂಟು ಬೆಳ್ಳಿ ನಾಣ್ಯಗಳು ನದಿ ದಾಟಲು ದೋಣಿಯವನಿಗೆ ಕೊಡಬೇಕಾದ ಕೂಲಿಗಾಗಿಯೇ ಹೊರತು. ಮತ್ತಾವುದಕ್ಕೂ ಅಲ್ಲ.



ಮತ್ತೆ ಸ್ವಲ್ಪಹೊತ್ತು ಕಳೆದ ಮೇಲೆ ಲೋಭಿ ವರ್ತಕನು ಈಗ ಆ ಹೆಂಗುಸರ ಮನಸ್ಸು ಚೆನ್ನಾಗಿ ಹಣ್ಣಾಗಿರಬಹುದೆಂದು ಭಾವಿಸಿ ಅಲ್ಲಿಗೆ ಬಂದು, "ಅಯಿತು ಪಾಪ! ನಿಮ್ಮನ್ನು ನೋಡಿದರೆ ಅಯ್ಯೋ ಅನಿಸುತ್ತೆ. ಆ ಪಾತ್ರ ಕೊಟ್ಟು, ನಿಮಗೆ ಏನು ಬೇಕೋ ಒಂದೆರಡು ತೆಗೆದುಕೊಳ್ಳಿ" ಎಂದನು ತಾನು ದೊಡ್ಡ ತ್ಯಾಗಮಾಡುವವನ ಹಾಗೆ.

ಅವನನ್ನು ನೋಡಿ ತಾಯಿಗೆ ಮೈಯೆಲ್ಲಾ ಉರಿಯಿತು. "ಏನಪ್ಪಾ, ಲಕ್ಷ ಬೆಲೆಬಾಳುವ ಪಾತ್ರವನ್ನು ಉಪಾಯದಲ್ಲಿ ಒಳಗೆ ಸೇರಿಸಿ ಕೊಳ್ಳಲು ನೋಡಿದೆಯಾ? ನಿನ್ನ ಚೂರು ಪುಣ್ಯ ದಿಂದಲೇ ಇನ್ನೊಬ್ಬ ಹೊಸ ಊರಿನ ಧರ್ಮಾತ್ಮ ವರ್ತಕ ಬಂದ. ಅವನು ಸಾವಿರಾರು ರೂಪಾಯಿ ಕೊಟ್ಟು ಆ ಪಾತ್ರ ತೆಗೆದುಕೊಂಡು ಹೋದ. ಇನ್ನೇನೂ ನಿನ್ನ ದಯ ಬೇಡ, ಹೋಗು" ಎಂದಳು.

ಆ ಮಾತು ಕೇಳಿ ಲೋಭಿ ವರ್ತಕನಿಗೆ ಕೋಪವೂ ಮತಿಭ್ರಮಣೆಯೂ ಉಂಟಾಯಿತು. "ನಾವು ಮೊದಲೇ ಮಾತಾಡಿಕೊಂಡ ಷರತ್ತಿಗೆ ವಿರೋಧವಾಗಿ ನಾನು ಬಂದ ಬೀದಿಗೆ ಅವನು ಹೇಗೆ ಬಂದ? ಎತ್ತ ಹೋದ!" ಎಂದು ಕೂಗಿದ.

"ಅವನಾಗಿ ಬರಲಿಲ್ಲ. ನೀನು ಬಿಸುಟ ಪಾತ್ರ ಜಜ್ಜಿತ್ತು. ಅದನ್ನು ಸರಿಮಾಡಲು ಪಕ್ಕದ ಬೀದಿಗೆ ಹೋಗಿ ಆತನನ್ನು ನೋಡಿ ಕರಕೊಂಡು ಬಂದೆ" ಎಂದಳು ಹುಡುಗಿ. "ಅಯ್ಯಯ್ಯೋ" ಎಂದು ಆ ಲೋಭಿ ಅಳುತ್ತಾ, ಆವೇಶದಿಂದ ಆಕ್ರೋಶಿಸುತ್ತಾ ಪೂರ್ತಿ ಬುದ್ಧಿ ಕೆಟ್ಟು ತನ್ನ ಸರಕುಗಳನ್ನೆಲ್ಲಾ ಆ ಹೆಂಗುಸರ ಮನೆಯಲ್ಲೇ ಬಿಟ್ಟು ಮೇಲಿನ ಬಟ್ಟೆ ಜಾರಿ ಬೀಳುವುದನ್ನೂ ಗಮನಿಸದೆ ಓಡಿದ. ಅವನು ನದೀ ತೀರವನ್ನು ತಲಪಿದಾಗ ತಕ್ಕಡಿಯೊಂದೇ ಅವನ ಕೈಯಲ್ಲಿತ್ತು. ಬೋಧಿಸತ್ವನು ದೋಣಿಯಲ್ಲಿ ನದಿ ದಾಟುತ್ತಿರುವುದನ್ನು ನೋಡಿ, ಹಿಂದೆ ಬರುವಂತೆ ಕರೆಯತೊಡಗಿದ.

ಬೋಧಿಸತ್ವನಿಂದ ಹಣ ಪಡೆದ ದೋಣಿ ಯವನು ದೋಣಿಯನ್ನು ಹಿಂದಿರುಗಿಸಲಿಲ್ಲ. ಬೋಧಿಸತ್ವನೂ ಸುಮ್ಮನಿದ್ದನು. ಬೋಧಿಸತ್ವನು ಆ ಸ್ವರ್ಣ ಪಾತ್ರದೊಂದಿಗೆ ಆಚೆಯ ತೀರವನ್ನು ಸೇರಿದುದನ್ನು ನೋಡಿದ ಕೂಡಲೇ ಲೋಭಿ ವರ್ತಕನಿಗೆ ಹತಾಶೆಯ ಪೆಟ್ಟು ಬಹು ಜೋರಾಗಿ ಹೃದಯವು ವೇಗವಾಗಿ ಹೊಡೆದುಕೊಳ್ಳ ತೊಡಗಿ, ಅಲ್ಲೇ ಬಿದ್ದು ಪ್ರಾಣಬಿಟ್ಟನು.

ಬೋಧಿಸತ್ವನ ನ್ಯಾಯದಿಂದ ಬಡ ಹೆಂಗುಸು ಶ್ರೀಮಂತಳಾಗಿ ಕನ್ಯೆಗೆ ಒಳ್ಳೆಯ ಕಡೆ ಮದುವೆ ಮಾಡಿದಳು. ಬೋಧಿಸತ್ವನೂ ದಾನ ಧರ್ಮಾದಿ ಗಳಿಂದ ಪುಣ್ಯಕಾರ್ಯಗಳನ್ನು ಮಾಡುತ್ತಿದ್ದನು.






# ಬುದ್ಧನ ಪ್ರಸ್ಥಾನ

ಬುದ್ಧತ್ವ ಹೊಂದಿದ ಸಿದ್ಧಾರ್ಥನು ಜನನ ಮರಣ ಬಂಧಗಳಿಂದ ವಿಮುಕ್ತನಾಗಿ ನಿರ್ವಾಣತೆಯ ಪರಿಸ್ಥಿತಿಯಲ್ಲಿದ್ದನು. ಆದರೆ ಮಾನವ ಸಮುದಾಯವು ಪೀಡಿತ ಪರಿಸ್ಥಿತಿಯಲ್ಲಿ; ಅಜ್ಞಾನಾಂಧಕಾರದಲ್ಲಿ ಬಿದ್ದಿರುವುದನ್ನು ನೋಡಿ ಅವನು ನಿರ್ವಾಣನಾಗುವ ಆಲೋಚನೆಯನ್ನು ಬಿಟ್ಟು, ಪ್ರಜೆಗಳಿಗೆ ಜ್ಞಾನೋಪದೇಶ ಮಾಡಬೇಕೆಂದು ಸಂಕಲ್ಪಿಸಿಕೊಂಡನು.

ಮೊತ್ತಮೊದಲು ಅವನು ತನ್ನನ್ನು ಬಿಟ್ಟು ಹೋದ ಐವರು ತಪಸ್ವಿಗಳನ್ನು ಹುಡುಕುತ್ತ, ವಾರಾಣಾಸಿಯ ಸಮೀಪದಲ್ಲಿದ್ದ ಒಂದು ವನದಲ್ಲಿ ಅವರನ್ನು ನೋಡಿದನು. ಅವರು ಅವನನ್ನು ಮೊದಲು ಲಕ್ಷ್ಯಮಾಡಲಿಲ್ಲ. ಆದರೆ ಅವನು ತೀರ ಸಮೀಪಿಸಿದ ಮೇಲೆ ಪರವಶರಾಗಿ ಅವನಿಗೆ ಪ್ರಣಾಮ ಮಾಡಿದರು.





ಆಮೇಲೆ ಬುದ್ಧನಿಗೆ ಶಿಷ್ಯನಾಗಿ ಒಬ್ಬ ಧನಿಕನ ಕುಮಾರನಾದ ಯಶನೆಂಬವನು ಬಂದನು. ಅದನ್ನು ತಿಳಿದು ಯಶನ ತಂದೆ ಕೋಪಗೊಂಡು ತನ್ನ ಮಗನನ್ನು ಕರೆದುಕೊಂಡು ಹೋಗಲು ಬಂದನು. ಬುದ್ಧನು ಆ ತಂದೆಯೊಂದಿಗೆ ಸ್ವಲ್ಪ ಹೊತ್ತು ಮಾತಾಡಿದ ಮೇಲೆ, ಅವನು ಕೂಡಾ ಬುದ್ಧನಿಗೆ ಶಿಷ್ಯನಾದನು.



ಒಂದು ಕೊಳದ ಬದಿಯಲ್ಲಿ ಕೆಲಮಂದಿ ಸಂಪನ್ನ
ಯುವಕರು ತಮ್ಮ ಹೆಂಡತಿಯರೊಂದಿಗೆ
ವಿಹರಿಸಿಕೊಂಡಿದ್ದರು. ಅವರಲ್ಲಿ ಬ್ರಹ್ಮಚಾರಿ
ಯಾದ ಒಬ್ಬನು ತನ್ನೊಂದಿಗೆ ಒಬ್ಬಳು ನರ್ತಕಿ
ಯನ್ನು ಕರೆದುಕೊಂಡಿದ್ದನು. ಎಲ್ಲರೂ ನಿದ್ರೆಯ
ಲ್ಲಿದ್ದಾಗ ಆ ನರ್ತಕಿ ಎಲ್ಲರ ನಗಗಳನ್ನೂ
ಅಪಹರಿಸಿಕೊಂಡು ಓಡಿಹೋದಳು.

ನಿದ್ರೆಯಿಂದೆದ್ದ ಯುವಕರು ಅವಳನ್ನು
ಹಿಡಿಯಲು ಹೊರಟರು. ದಾರಿಯಲ್ಲಿ ಅವರಿಗೆ
ಬುದ್ಧನು ಕಾಣಿಸಿದನು. "ನರ್ತಕಿಗಾಗಿ ಹುಡುಕು
ವುದೂ. ನಿಮ್ಮ ಆತ್ಮಗಳನ್ನು ಅನ್ವೇಷಿಸುವುದೂ
ಇವೆರಡರಲ್ಲಿ ಯಾವುದು ಮೇಲು ?" ಎಂದು
ಬುದ್ಧನು ಅವರನ್ನು ಕೇಳಿದನು. ಅವರು
ಜಡತ್ವದಿಂದ ಹೊರಬಿದ್ದು ಬುದ್ಧನ ಶಿಷ್ಯರಾದರು.





ಉರುವೇಲದ ಬಳಿಯಲ್ಲಿ ಕಸ್ಸಪನೆಂಬ ಪ್ರಸಿದ್ಧ
ತಪಸ್ವಿ ಐನೂರು ಮಂದಿ ಶಿಷ್ಯರೊಂದಿಗೆ,
ತಾನು ಮಹಾ ಜ್ಞಾನಿಯೆಂದು ಗರ್ವದಲ್ಲಿದ್ದನು.
ಅವನಿಗೆ ಬುದ್ಧನು ತನ್ನ ಮತವನ್ನು ಬೋಧಿಸಿ
ಅವನನ್ನೂ ಅವನ ಶಿಷ್ಯರನ್ನೂ ತನ್ನ ಶಿಷ್ಯ
ವರ್ಗದಲ್ಲಿ ಸೇರಿಸಿಕೊಂಡನು.

ಕಸ್ಸಪನೂ ಅವನ ಶಿಷ್ಯರೂ ತಮ್ಮ ಜಡೆಗಳನ್ನು ಕತ್ತರಿಸಿ ನದಿಯಲ್ಲಿ ಬಿಸುಟರು. ಅನೇಕ ಯೋಜನಗಳ ದೂರದಲ್ಲಿ ಮತ್ತಿಬ್ಬರು ತಪಸ್ವಿಗಳ ಶಿಷ್ಯರು ನದಿಯಲ್ಲಿ ಸ್ನಾನಮಾಡುತ್ತ, ನೀರಿನಲ್ಲಿ ಹೊಡೆದುಕೊಂಡು ಬರುವ ಜಡೆಗಳನ್ನು ನೋಡಿ, ಕುತೂಹಲದಿಂದ ಉರುವೇಲಕ್ಕೆ ಬಂದು ಬುದ್ಧನ ಶಿಷ್ಯರಾದರು.





ಬುದ್ಧನ ಖ್ಯಾತಿ ವಿಸ್ತರಿಸಿತು. ಅಸಂಖ್ಯಾಕರಾದ ಶಿಷ್ಯರನ್ನು ಹಿಂದಿಟ್ಟುಕೊಂಡು ಬುದ್ಧನು ರಾಜ ಗೃಹಕ್ಕೆ ಬಂದನು. ಬಿಂಬಿಸಾರ ಮಹಾರಾಜನು ಅವನಿಗೆ ಗೌರವ ಪುರಸ್ಸರವಾಗಿ ಆತಿಥ್ಯವಿತ್ತು ತನ್ನ ಕೈಯಿಂದಲೇ ಬುದ್ಧನಿಗೆ ತುತ್ತನ್ನು ಊಡಿಸಿದನು.

ಬುದ್ಧನ ತಂದೆ ಶುದ್ಧೋದನನು ಬುದ್ಧನನ್ನು ಕಪಿಲ ವಸ್ತುವಿಗೆ ಆಹ್ವಾನಿಸಲು ದೂತರನ್ನು ಕಳುಹಿಸಿದನು. ಹೋದ ದೂತರು ತಿರುಗಿ ಬರಲಿಲ್ಲ. ಅವರು ಬುದ್ಧನೊಂದಿಗೇ ಉಳಿದು ಹೋದರು. ಆದರೂ ಬುದ್ಧನು ಕಪಿಲವಸ್ತುವಿಗೆ ಬಂದನು. ಅವನಿಗೆ ಅವನ ತಂದೆಯೂ. ಮಲತಾಯಿಯೂ ಇತರರೂ ಘನವಾದ ಸ್ವಾಗತವಿತ್ತರು.





ರಾಜಕುಟುಂಬಕ್ಕೆ ಸೇರಿದವರೆಲ್ಲರೂ ಬುದ್ಧನನ್ನು ನೋಡಲು ಬಂದರು. ಆದರೆ ಅವನ ಹೆಂಡತಿ ಯಶೋಧರೆ ಬರಲಿಲ್ಲ. "ನಾನು ಅವರ ದಯೆಗೆ ಪಾತ್ರಳಾಗಿದ್ದರೆ ಅವರೇ ನನ್ನ ಬಳಿಗೆ ಬರುತ್ತಾರೆ" ಎಂದಳು ಅವಳು. ನಿಜಕ್ಕೂ ಅವಳೂ ಸನ್ಯಾಸಿನೀ ಜೀವಿತದಲ್ಲೇ ಇದ್ದಳು. ಕಡೆಗೆ ಬುದ್ಧನು ತಾನೇ ಅವಳನ್ನು ನೋಡಲು ಬಂದನು.

ಬುದ್ಧನು ಸನ್ಯಾಸಿಯಾದ ಕಾರಣದಿಂದ ಅವನ ಸ್ಥಾನದಲ್ಲಿ ಅವನ ಜ್ಞಾತಿಯಾದ ಆನಂದನನ್ನು ರಾಜನನ್ನಾಗಿ ಮಾಡಲು ಪ್ರಯತ್ನ ನಡೆಯುತ್ತಿದ್ದಿತು. ಆ ದಿನವೇ ಅವನ ವಿವಾಹವೂ ನಡೆಯಲಿತ್ತು. ಆನಂದನು ಮದುಮಗನ ಅಲಂಕಾರದಲ್ಲಿ ಬೆಳಗಿಕೊಂಡಿದ್ದನು. ನಗರದಲ್ಲಿ ಉತ್ಸವ ಸಂಭ್ರಮ.








ಆನಂದನು ಬುದ್ಧನ ಆಶೀರ್ವಾದ ಪಡೆಯಲು ಬಂದನು. ಬುದ್ಧನು ಅವನಿಗೆ ತನ್ನ ಭಿಕ್ಷಾಪಾತ್ರವನ್ನು ಕೊಟ್ಟು ಪ್ರಯಾಣ ಹೊರಟನು. ಆನಂದನು ಅವನ ಹಿಂದೆಯೇ ಹೊರಟನು. ಆನಂದನ ವಧು ಕಿಟಿಕಿಯಿಂದ ಆ ದೃಶ್ಯವನ್ನು ನೋಡಿ ಅತ್ತಳು. ಆದರೆ ಬುದ್ಧನು ತನ್ನ ಭಿಕ್ಷಾಪಾತ್ರವನ್ನು ತಾನು ಪಡೆಯಲಿಲ್ಲ. ಆನಂದನು ಅದನ್ನು ಅವನಿಗೆ ತಿರುಗಿ ಕೊಡಲಾಗದೆ ಬುದ್ಧನ ಹಿಂದೆಯೇ ಹೋದನು.

# ತೃಪ್ತಿ

ವೆಂಕಪ್ಪನು ರಾಜಧಾನಿಯಲ್ಲಿ ನಡೆಯುವ ಶ್ರೀರಾಮನವಮಿ ಉತ್ಸವ ನೋಡಲು ಮೊದಲನೇ ಸಾರಿಯಾಗಿ ನಗರಕ್ಕೆ ಹೋದನು. ಮಹಾರಾಜನ ಕೋಟೆಯೊಳಗೆ ನಡೆಯುವ ಈ ಉತ್ಸವಕ್ಕೆ ಪ್ರಸಿದ್ಧರಾದ ಕಲಾಕಾರರು ಬರುತ್ತಾರೆ. ಮೊದಲನೇ ದಿನ ಗಾಯಕರು ಅದ್ಭುತವಾಗಿ ಹಾಡಿದರು. ಕೇಳಿದವರೊಂದಿಗೆ ವೆಂಕಪ್ಪನೂ ಅದನ್ನು ಕೇಳಿ ತನ್ಮಯನಾದನು. ಆದರೆ ತನಗೆ ಹಾಡಲು ಬಾರದಿರುವುದನ್ನು ನೆನೆದು ಚಿಂತೆಗೂ ಬಿದ್ದನು. ಎರಡನೇ ದಿನ ಕವಿಗಳು ಅರ್ಥವತ್ತಾದ, ಭಾವಭರಿತಗಳಾದ ಕವಿತೆಗಳನ್ನು ಹಾಡಿದರು. ಪಂಡಿತರೆಲ್ಲಾ ಹರ್ಷಧ್ವನಿ ಮಾಡಿದರು. ಕೆಲವರ ಕವಿತೆ ವೆಂಕಪ್ಪನಿಗೆ ಸುಲಭವಾಗಿ ಅರ್ಥವಾಯಿತು. ಆದರೂ ಅಂತಹುದೊಂದು ಪದ್ಯ ಬರೆಯಲಿಕ್ಕೆ ತನ್ನಿಂದಾಗದಿರುವುದಕ್ಕೆ ನೊಂದುಕೊಂಡನು. ಮೂರನೇ ದಿನ ಶಿಲ್ಪಕಲೆಗಳನ್ನೂ, ಚಿತ್ರಲೇಖನಗಳನ್ನೂ ಪ್ರದರ್ಶಿಸಲಾಯಿತು. ವೆಂಕಪ್ಪನ ಕಣ್ಣಿಗೆ ಅವು ಯಾವ ದೇವತೆಗಳೋ ಮಾಡಿದಂತೆ ತೋರಿದುವು. ತನ್ನ ಜನ್ಮದಲ್ಲಿ ತಾನೊಂದು ಚಿತ್ರ ಕೂಡಾ ಬರೆಯಲಾಗದುದಕ್ಕೆ ಕುಂದಿಹೋದನು.

ಉತ್ಸವ ಮುಗಿದು ರಾಜಧಾನಿಯಿಂದ ಹಿಂದಿರುಗುವಾಗ ಬೀದಿಯಲ್ಲಿ ಒಬ್ಬ ಹೆಳವನನ್ನೂ, ಇನ್ನೊಬ್ಬ ಕುರುಡನನ್ನೂ, ಮತ್ತೊಬ್ಬ ಕಿವುಡನನ್ನೂ ನೋಡಿದನು. ಅಕಸ್ಮಾತ್ತಾಗಿ ಅವರನ್ನು ನೋಡಿ ವೆಂಕಪ್ಪನಿಗೆ ಮನಸ್ಸು ಕರಗಿತು. ತಾನು ಎಲ್ಲಿಂದಲೋ ಬಂದು ಸಂಗೀತ, ಸಾಹಿತ್ಯ, ಚಿತ್ರ ಕಲೆಗಳನ್ನು ನೋಡಿ ಆನಂದಿಸಿದವನು. ಇವರು ರಾಜಧಾನಿಯಲ್ಲಿದ್ದು ಕೂಡಾ ಅಂಥ ಆನಂದ ಪಡೆಯಲಾರರು. ಈ ಸಂಗತಿ ಸ್ಫುರಿಸುತ್ತಲೇ, ಸಂತೋಷ ಪಡಬೇಕಾದ ತಾನು ನೊಂದುಕೊಂಡುದಕ್ಕೆ ನಾಚಿಕೊಂಡನು. ಆಗ ಅವನಿಗೆ ಆತ್ಮ ತೃಪ್ತಿಯುಂಟಾಯಿತು.





# ಅಣ್ಣತಮ್ಮಂದಿರು

**ಒಂ**ದು ಊರಿನಲ್ಲಿ ಒಬ್ಬ ವ್ಯಾಪಾರದವನಿದ್ದನು. ಅವನಿಗೆ ಇಬ್ಬರು ಗಂಡು ಮಕ್ಕಳಿದ್ದರು. ಇಬ್ಬರೂ ಅನ್ಯೋನ್ಯತೆಯಿಂದಲೇ ಬೆಳೆದು ದೊಡ್ಡವರಾಗಿ, ವ್ಯಾಪಾರ ವ್ಯವಹಾರಗಳಲ್ಲಿ ತಂದೆಗೆ ಸಹಾಯಕರಾಗಿಯೂ ಇದ್ದರು. ಒಂದುದಿನ ಚಿಕ್ಕಮಗನು ಯಾವುದೋ ಕೆಲಸದ ನಿಮಿತ್ತವಾಗಿ ನೆರೆಯ ಊರಿಗೆ ಹೋಗಿದ್ದನು. ಆಗ ಅಕಸ್ಮಾತ್ತಾಗಿ ವ್ಯಾಪಾರಿಗೆ ಎದೆನೋವು ಪ್ರಾರಂಭವಾಗಿ ನರಳುತ್ತ ದೊಡ್ಡ ಮಗನನ್ನು ತನ್ನ ಬಳಿಗೆ ಕರೆದು, "ಮಗನೇ, ನಾನಿನ್ನು ಬದುಕಲಾರೆ. ನೀವಿಬ್ಬರೂ ಅಣ್ಣ ತಮ್ಮಂದಿರು ಇದುವರೆಗೂ ಕೂಡಿಕೊಂಡಿದ್ದಂತೆಯೇ ನನ್ನ ಅನಂತರವೂ ಕೂಡಿಕೊಂಡೇ ಇರಬೇಕೆಂಬುದು ನನ್ನಾಸೆ. ನಿನ್ನ ತಮ್ಮನದು ಸ್ವಲ್ಪ ದುಡುಕು ಗುಣ. ಆದ್ದರಿಂದ ನೀನೇ ಅವನೊಂದಿಗೆ ಸರಿಮಾಡಿಕೊಂಡು ಹೋಗಬೇಕು" ಎಂದು ಹೇಳಿ ಪ್ರಾಣ ಬಿಟ್ಟನು.

ಚಿಕ್ಕವನ ಹೆಂಡತಿ ದೂರದಲ್ಲಿದ್ದು ಗಮನಿಸುತ್ತ, ಮಾವಯ್ಯನವರು ಸಾಯುವ ಮೊದಲು ತನ್ನ ಬಾವನ ಹತ್ತಿರ ಏನೋ ಮುಖ್ಯ ವಿಷಯ ಹೇಳಿದರೆಂದುಕೊಂಡಳು. ಆಮೇಲೆ ಚಿಕ್ಕವನು ಬಂದನು. ಅಣ್ಣ ತಮ್ಮಂದಿರು ತಂದೆಯ ಉತ್ತರ ಕ್ರಿಯೆಗಳನ್ನೆಲ್ಲಾ ಮಾಡಿ ಮುಗಿಸಿದರು.

ಆಮೇಲೆ ಚಿಕ್ಕವನೊಂದಿಗೆ ಅವನ ಹೆಂಡತಿ, "ನಿಮ್ಮ ಅಣ್ಣ ಮಾವಯ್ಯನನ್ನು ಕುರಿತು ನಿಮ್ಮ ಹತ್ತಿರ ಏನಾದರೂ ಹೇಳಿದರೆ ?" ಎಂದು ಕೇಳಿದಳು.

"ಇಲ್ಲವಲ್ಲ ? ಅಂಥಾದ್ದೇನಿದೆ ?" ಎಂದು ಚಿಕ್ಕವನು ಹೆಂಡತಿಯನ್ನು ಕೇಳಿದನು.

"ಅದೇನೋ ನನಗೂ ಗೊತ್ತಿಲ್ಲ. ಸಾಯುವ ಮೊದಲು ಮಾವಯ್ಯ ಬಾವಯ್ಯನ ಹತ್ತಿರ ಗುಸುಗುಸು ಅಂತ ಏನೋ ಗುಟ್ಟಾಗಿ ಹೇಳಿದರೆಂಬುದಷ್ಟು ನನಗೆ ಗೊತ್ತು. ಅವರು ಎಲ್ಲಿಯೋ ಹಣವನ್ನೋ ನಗನಟ್ಟುಗಳನ್ನೋ ಅಡಗಿಸಿಟ್ಟು, ಆ ಸಂಗತಿ ಅವರಿಗೆ ಹೇಳಿರಬೇಕು. ಹಿರೀ ಮಗನ ಹತ್ತಿರವಲ್ಲದೆ ಮತ್ತಾರ ಹತ್ತಿರ ಹೇಳುತ್ತಾರೆ ? ಬಾವಯ್ಯ ಸುಮ್ಮನಿರುವರೆಂದರೆ, ನನಗೆ ಅನುಮಾನವಾಗೇ ಇದೆ" ಎಂದಳು ಚಿಕ್ಕವನ ಹೆಂಡತಿ.

"ಸುಮ್ಮನಿರು. ಅಣ್ಣ ಅಂಥವನಲ್ಲ" ಎಂದ ಚಿಕ್ಕವ. ಚಿಕ್ಕವಳಿಗೆ ಅವಿಭಕ್ತ ಸಂಸಾರವಾಗಿರಲು

**ಜಿ. ಶಿವಕುಮಾರ್**

ಸ್ವಲ್ಪವೂ ಇಷ್ಟವಿರಲಿಲ್ಲ. ಮಾವಯ್ಯ ಬದುಕಿರುವ ವರೆಗೆ ಆ ಅಣ್ಣ ತಮ್ಮಂದಿರನ್ನು ಸೀಳಲು ಅವಳಿಂದಾಗಲಿಲ್ಲ. ಈಗ ಮಾವಯ್ಯ ಸತ್ತುದು ಮಾತ್ರವಲ್ಲದೆ, ಅಣ್ಣ ತಮ್ಮಂದಿರ ಮಧ್ಯೆ ಭೇದ ಉಂಟುಮಾಡಲು ಒಂದು ಆಧಾರವೂ ದೊರಕಿ ಬಿಟ್ಟಿದೆ. ಅವಳು ಹಾಕಿದ ವಿಷಬೀಜವು ಚಿಕ್ಕವನ ಮನಸ್ಸಿನಲ್ಲಿ ನಾಟಿಕೊಂಡು ವೃದ್ಧಿಯಾಗತೊಡಗಿತು.

ಒಂದುದಿನ ಅವನು ಅಣ್ಣನನ್ನು ಕುರಿತು, "ಅಣ್ಣ, ಒಂದು ಸಂಗತಿ ತಿಳಿಯಬೇಕು. ಅಪ್ಪ ಸಾಯುವ ಮೊದಲು ನಿನ್ನ ಹತ್ತಿರ ಏನೋ ಹೇಳಿದ ರಂತೆ, ಏನದು ?" ಎಂದು ಕೇಳಿದನು.

"ಅದೇನಿಲ್ಲ ಬಿಡು. ತಾನು ಸತ್ತುಹೋದ ಮೇಲೆ ಕೂಡಾ ನಾವಿಬ್ಬರೂ ಅನ್ಯೋನ್ಯತೆಯಿಂದ ಒಂದೇ ಮನೆಯಲ್ಲಿ ಒಗ್ಗಟ್ಟಾಗಿ ಇರಬೇಕು. ಅದೇ ತನ್ನ ಕಡೇ ಆಸೆ ಅಂದರು. ಅಷ್ಟೇ" ಎಂದ ಅಣ್ಣ.



ಸಣ್ಣವನಿಗೆ ತೃಪ್ತಿಯಾಗಲಿಲ್ಲ. ಅವನ ಅಸಂತೃಪ್ತಿ ಯನ್ನು ಅವನ ಹೆಂಡತಿ ಕೆದರಿ ಕೆದರಿ ದೊಡ್ಡದೇ ಮಾಡಿದಳು. ಒಂದುದಿನ ತಮ್ಮನು ಅಣ್ಣ ನೊಂದಿಗೆ, ತನ್ನ ಪಾಲು ತೆಗೆದುಕೊಂಡು ತಾನು ಬೇರೆ ಹೋಗುವೆನೆಂದು ಹೇಳಿಬಿಟ್ಟನು.

"ಅಷ್ಟು ಅವಸರ ಏನುಬಂತು ಈಗ ?" ಎಂದು ೕಳಿದ ಅಣ್ಣ. ತಮ್ಮನು ತನಗೆ ಅಣ್ಣನ ಮೇಲಿರುವ ಸಂದೇಹವನ್ನು ಸ್ಪಷ್ಟವಾಗಿ ಹೇಳಿದನು. ತಂದೆ ಅಡಗಿಸಿಟ್ಟ ರಹಸ್ಯ ಹಣವನ್ನು ಅಣ್ಣ ನೊಬ್ಬನೇ ಸ್ವಾಹಾ ಮಾಡಲು ಒಂದೇ ಮನೆಯಲ್ಲಿ ಒಟ್ಟಾಗಿದ್ದರೆ ಸೌಕರ್ಯವೆಂಬುದೇ ಅಣ್ಣನ ಭಾವನೆಯಂತೆ! "ಆಗಲಿ." ಎಂದು ಹೇಳಿ ಅಣ್ಣನು ಆಗ ಅವನನ್ನು ಸುಮ್ಮನಿರಿಸಿ, ತನ್ನ ಹೆಂಡತಿಯ ಎಲ್ಲಾ ನಗಗಳನ್ನೂ ತೆಗೆದುಕೊಂಡು, ಬಡ್ಡೀ ಲೇವಾ ದೇವಿಯ ಸರಾಫನ ಬಳಿಗೆ ಹೋಗಿ, ಅವುಗಳಿಗೆ ಅಡವಿನ ಮೇಲೆ ಎಷ್ಟು ಹಣ ಸಿಗುವುದೋ ಅಷ್ಟನ್ನೂ ಪಡೆದುಕೊಂಡನು. ಹೀಗೆ ಅವನು ಹಣ ಪಡೆದು ಕೊಳ್ಳುವಾಗ ಸರಾಫನ ಮಗನೂ ಅಲ್ಲೇ ಇದ್ದನು. ಅವನು ಅಣ್ಣನಿಗೆ ಬಾಲ್ಯಮಿತ್ರ.

ಅಣ್ಣನು ಹಣದ ಚೀಲದೊಂದಿಗೆ ಅಲ್ಲಿಂದ ಹೊರಬಂದಾಗ, ಸರಾಫನ ಮಗನು ಅಣ್ಣನ ಬಳಿಗೆ ಬಂದು, "ಅಲ್ಲಯ್ಯ, ಇಷ್ಟು ಹಣದ ಅಗತ್ಯ ಏನು ಬಂತು ನಿನಗೆ ?" ಎಂದು ಕೇಳಿದನು.

ಅಣ್ಣನು ಹೇಳಲು ಹಿಂದೆ ಮುಂದೆ ನೋಡಿದನು. ಅದನ್ನು ತಿಳಿದು ಸರಾಫನ ಮಗ, "ನಿನ್ನ ಮಿತ್ರನಾದ ನನ್ನೊಂದಿಗೂ ಹೇಳಲಾಗದಷ್ಟು ಗುಟ್ಟಿನ ವಿಷಯವೇನು ?" ಎಂದನು.

"ಆದರೆ ಬೇರೆಯಾರೊಂದಿಗೂ ಹೇಳಿಬಿಡಬೇಡ. ನನ್ನ ತಂದೆ ಸಾಯುವಾಗ ಹತ್ತಿರ ಇದ್ದವನು ನಾನೇ. ಸಾಯುವ ಮೊದಲು ಏನೋ ನಿಧಿಯ ರಹಸ್ಯ ನನ್ನ ಹತ್ತಿರ ಹೇಳಿ ಸತ್ತರೆಂದು ನನ್ನ ತಮ್ಮನಿಗೆ ಅನುಮಾನವಾಗಿದೆ. ಆ ಕಾರಣದಿಂದ

ಅವನು ಪಾಲಾಗಬೇಕೆಂದು ತಗಾದೆ ಮಾಡುತ್ತಾನೆ. ಪಾಲಾಗಬಾರದೆಂದೇ ತಂದೆ ಹೇಳಿದ ಕಡೇಮಾತು. ಅವನ ಅನುಮಾನ ಪರಿಹರಿಸಲು ಒಂದು ನಿಧಿಯನ್ನು ನಾನೇ ಸೃಷ್ಟಿಸಿ ನಮ್ಮ ಅಪ್ಪನ ಕಡೆಯಾಸೆಯಂತೆ ಇಬ್ಬರೂ ಕೂಡಿಯೇ ಇರಲು ಏರ್ಪಾಡು ಮಾಡುತ್ತೇನೆ" ಎಂದು ಅಣ್ಣನು ತನ್ನ ಪಥಕವನ್ನು ತನ್ನ ಮಿತ್ರನೊಂದಿಗೆ ಹೇಳಿದನು.

ಹೀಗೆ ತಂದ ಹಣವನ್ನು, ಅಣ್ಣನು ಒಂದು ಹಳೆಯ ಚೊಂಬಿನೊಳಗೆ ಹಾಕಿ, ಅರ್ಧರಾತ್ರಿಯ ವೇಳೆಯಲ್ಲಿ, ಮನೆಯ ಆವರಣದೊಳಗಿನ ಒಂದು ಮೂಲೆಯಲ್ಲಿ ಹುಗಿದಿಟ್ಟನು.

ಮರುದಿನ ಅಣ್ಣನು ತಮ್ಮನನ್ನು ಕರೆದು, ಅವನ ಕೈ ಹಿಡಿದು, "ತಮ್ಮಾ, ನೀನು ನನ್ನನ್ನು ಕ್ಷಮಿಸಬೇಕು. ಏಕೆಂದರೆ ನಿನ್ನ ಅನುಮಾನ ನಿಜವೇ ಎಂದು ಈಗ ನಿನಗೆ ಹೇಳುತ್ತೇನೆ. ನಮ್ಮ ಅಪ್ಪ ಸಾಯುವ ಮೊದಲು ನಮ್ಮ ತೋಟದ ಮೂಲೆಯಲ್ಲಿ ಹುಗಿದಿಟ್ಟ ನಿಧಿಯನ್ನು ಕುರಿತು ಹೇಳಿ ಅದನ್ನು ನಾವಿಬ್ಬರೂ ತೆಗೆದುಕೊಳ್ಳಬೇಕೆಂದು ಹೇಳಿದ್ದಾರೆ. ನಾನು ದುರಾಶೆಗೆ ಬಿದ್ದು ಆ ಸಂಗತಿ ಮುಚ್ಚಿಟ್ಟು ಸುಮ್ಮನಿದ್ದೆ. ರಾತ್ರಿ ಅಪ್ಪ ಸ್ವಪ್ನದಲ್ಲಿ ಬಂದು ತುಂಬಾ ಬಯ್ದು ಬುದ್ಧಿ ಹೇಳಿದರು. ನಾನು ಮಾಡಿದ ತಪ್ಪಿಗೆ ಶಿಕ್ಷೆಯಾಗಿ ಆ ನಿಧಿಯಷ್ಟೂ ನೀನೇ ತೆಗೆದುಕೊಂಡು ಬಿಡು. ನಾವಿಬ್ಬರೂ ಒಟ್ಟಿಗೆ ಈ ಮನೆಯಲ್ಲೇ ಇರದಿದ್ದರೆ ಅಪ್ಪನಿಗೆ ಶಾಂತಿ ಇಲ್ಲವಂತೆ. ಅದನ್ನೂ ಒತ್ತಿ ಹೇಳಿದರಪ್ಪ" ಎಂದನು.

ಅದನ್ನು ಕೇಳಿ ತಮ್ಮನು, "ಇದು ಬಹಳ ತಮಾಷೆಯಾಗಿದೆ! ನಿನ್ನೆ ರಾತ್ರಿ ನನಗೂ ಅಪ್ಪ ಕನಸಿನಲ್ಲಿ ಬಂದು, 'ಎಲೋ ಮೂಢಾ! ನಿನ್ನ ಅಣ್ಣ ದುರಾಶಾಪರನೆಂದು ಅಪಾರ್ಥ ಮಾಡಿಕೊಳ್ಳುವಿಯಾ? ನಿನ್ನಲ್ಲಿರುವ ದುರಭಿಪ್ರಾಯವನ್ನು ಹೋಗಲಾಡಿಸಿ, ಒಗ್ಗಟ್ಟಾಗಿ ಈ ಮನೆಯಲ್ಲಿ ಅನ್ಯೋನ್ಯವಾಗಿರಬೇಕೆಂಬ ಉದ್ದೇಶದಿಂದ ನಿನ್ನಣ್ಣ ಅವನ ಹೆಂಡತಿಯ ನಗಗಳನ್ನೆಲ್ಲಾ ಅಡವಿಟ್ಟು ಹಣ ತಂದು ತೋಟದ ಮೂಲೆಯಲ್ಲಿ ಹುಗಿದು ನಿನಗೆ ಅರ್ಪಿಸಬೇಕೆಂದಿದ್ದಾನೆ. ಈಗಾದರೂ ಶುದ್ಧ ಮನಸ್ಕನಾಗಿ ಕ್ಷಮೆ ಕೇಳಿಕೋ' ಎಂದಿದ್ದಾರೆ." ಎಂದನು ಕಣ್ಣೀರು ತುಂಬುತ್ತಿರಲು.

ತನ್ನ ರಹಸ್ಯವು ಅವನಿಗೆ ತಿಳಿಯಿತೆಂದು ಅಣ್ಣನು ಬೆರಗಾದನು. ಅವನ ಆಶ್ಚರ್ಯವನ್ನು ನೋಡಿ ಚಿಕ್ಕವನು ನಗುತ್ತ, "ಏಕೆ ಆಶ್ಚರ್ಯ ಅಣ್ಣಾ? ನಿನ್ನೆ ಸಾಯಂಕಾಲ ನಿನ್ನ ಮಿತ್ರನಾದ ಸರಾಫರ ಮಗ ನನಗೆ ಎಲ್ಲಾ ಸಮಾಚಾರವನ್ನೂ ಹೇಳಿ ನನ್ನನ್ನು ತುಂಬಾ ಬೈದ ಕೂಡಾ! ನನಗೆ ಬುದ್ಧಿ ಬಂತು ಅಣ್ಣಾ!" ಎಂದು ಅಣ್ಣನ ಕಾಲು ಹಿಡಿದನು.



# ಅಸಲು ಕಾರಣ

ಹಿಂದೆ ಅನಂತನೆಂಬ ಒಬ್ಬ ಜಮೀನ್ದಾರನಿದ್ದ. ಅವನು ತನ್ನನ್ನು ಯಾರು ಹೇಗೆ ಹೊಗಳಿದರೂ ನಿಜವೇ ಎಂದುಕೊಳ್ಳುತ್ತಿದ್ದ.

ಒಂದು ದಿನ ಅವನು ತನ್ನ ಅಂತರಂಗಿಕರೊಂದಿಗೆ ಕೂಡಿಕೊಂಡು ತನ್ನ ದೊಡ್ಡಪಲ್ಲಕಿಯಲ್ಲಿ ವನ ಭೋಜನಕ್ಕೆ ಹೊರಟನು.

ನಡುಮಧ್ಯಾಹ್ನದ ಹೊತ್ತಿಗೆ ಎಲ್ಲರ ಭೋಜನವೂ ಸೊಗಸಾಗಿ ಮುಗಿಯಿತು.

ಅನಂತನು ತನ್ನ ಅಂತರಂಗಿಕರೊಂದಿಗೆ, "ಕೇಳಿದಿರಾ ದೂರದಲ್ಲಿರುವ ಆ ಸಮುದ್ರ ಘೋಷಣದಲ್ಲಿ ಮಂದಹಾಸವು ಕೇಳಿಸುತ್ತಿದೆ. ಇಲ್ಲಿರುವ ಆಲದಮರವು ಬೀಸುವಗಾಳಿಯಲ್ಲಿ ಬಹಳ ಇಂಪಾದ ಸಂಗೀತವು ಹೊರಡುತ್ತಿದೆ." ಎಂದನು.

"ಹೌದೌದು. ತಾವು ದೊಡ್ಡ ಭಾವಕವಿಗಳು!" ಎಂದು ಹೊಗಳುಭಟನ ಹಾಗೆ ಹೇಳಿದನೊಬ್ಬ.

ಉಳಿದವರೆಲ್ಲಾ "ನಿಜನಿಜ!" ಎಂದು ಚಪ್ಪಾಳೆ ತಟ್ಟಿದರು.

ಅವರಲ್ಲೊಬ್ಬನು ಪಲ್ಲಕಿಯ ಭೋಯಿಗಳ ಕಡೆಗೆ ತಿರುಗಿ "ಏನ್ರೋಯ್! ನಿಮಗೆ ಸಮುದ್ರ ಘೋಷಣದಲ್ಲಿ ನಗುವೂ, ಆಲದಮರದ ಗಾಳಿಯಲ್ಲಿ ಸಂಗೀತವೂ ಕೇಳಿಸುವುದಿಲ್ಲವೆ?" ಎಂದು ಕೇಳಿದನು ಜಮೀನ್ದಾರನ ಮೆಚ್ಚುಗೆ ಪಡೆಯಲೆಂದು.

"ಏನೋ ಅಪ್ಪಾ! ಹಸಿವೆಯಿಂದ ಕಿವಿಗಳು ತೂತುಬಿದ್ದು ನಮ್ಮ ಹೊಟ್ಟೆಯ ಕರುಳಿನ ಶಬ್ದವೇ ನಮಗೆ ಕೇಳುವುದಿಲ್ಲ!" ಎಂದ ಒಬ್ಬ ಬೋಯಿ ನೀರಸವಾದ ದನಿಯಿಂದ.

ಕೂಡಲೇ ಜಮೀನ್ದಾರನಿಗೆ ಅವರಾರೂ ಉಂಡಿಲ್ಲವೆಂಬುದು ನೆನಪಾಗಿ, ಅವರಿಗೆಲ್ಲಾ ಊಟಹಾಕಿಸಿದನು.





# ಆತುರದ ಅಳಿಯ

ಒಂದು ಊರಿನಲ್ಲಿ ಸಾರಮ್ಮನೆಂಬ ಹೆಂಗುಸಿದ್ದಳು. ಅವಳಿಗೆ ಸಿಂಹಾದ್ರಿ ಎಂಬ ಒಬ್ಬನೇ ಒಬ್ಬ ಮಗನಿದ್ದನು. ಅದನದು ಸಾಧು ಸ್ವಭಾವ. ಗುಣವು ಸರಳವಾದುದು. ಕಲಿಯುವುದರಲ್ಲಿ ದಡ್ಡನಾದುದರಿಂದ ವಿದ್ಯೆಯೂ ಸರಿಯಾಗಿ ಹತ್ತಲಿಲ್ಲ. ತಂದೆಯಿಲ್ಲದ ಸಿಂಹಾದ್ರಿಗೆ ತಂದೆಯ ಸೊತ್ತು ಬೇಕಾದಷ್ಟಿತ್ತು. ಯಾವುದೋ ಕಾರಣದಿಂದ ಅವನ ತಂದೆಯ ಮೇಲೆ ಕೋಪಗೊಂಡಿದ್ದ ಕೆಲವು ಬಂಧುಗಳು ಸಿಂಹಾದ್ರಿಯೊಬ್ಬ ಹೆಡ್ಡದೂಮನೆಂದು ಪ್ರಚಾರ ಮಾಡಿಬಿಟ್ಟರು. ತನ್ನ ಮಗನ ಮೇಲೆ ಒಳ್ಳೆಯ ಭಾವನೆ ಏನೂ ಇಲ್ಲದೆ, ಆಸ್ತಿಗಾಗಿಯೇ ಸಿಂಹಾದ್ರಿಯನ್ನು ತಮ್ಮ ಅಳಿಯನನ್ನಾಗಿ ಮಾಡಿಕೊಳ್ಳಲು ಮುಂದೆ ಬಂದವರ ಆಟವನ್ನು ಸಾರಮ್ಮ ತಡೆದುಬಿಟ್ಟಳು.

ತನ್ನ ಓರಿಗೆಯ ವಯಸ್ಸಿನವರಿಗೆಲ್ಲಾ ಮದುವೆಯಾಗಿರಲು, ತನಗಿನ್ನೂ ಏಕೆ ಮದುವೆಯಾಗಿಲ್ಲವೆಂದು ಸಿಂಹಾದ್ರಿ ತಾಯಿಯನ್ನು ಪೀಡಿಸ ತೊಡಗಿದನು. ಅವಳೇನೋ ಮಗನ ಮದುವೆಯ ಪ್ರಯತ್ನವನ್ನು ಮಾಡುತ್ತಲೇ ಇದ್ದಳಾದರೂ ಯೋಗ ಕೂಡಿಬಂದಿರಲಿಲ್ಲ. ಸಿಂಹಾದ್ರಿ ಬರೀ ಹೆಡ್ಡನೆಂದು ಬಂಧುಗಳು ಮಾಡಿದ ಪ್ರಚಾರವು ಸುಮ್ಮನೆ ಹೋಗಲಿಲ್ಲ. ಅದಕ್ಕೆ ತಕ್ಕ ಹಾಗೆಯೇ ಅವನು ಅಮಾಯಕತನದ ಪ್ರಶ್ನೆಗಳನ್ನು ಮಾಡುವುದರಿಂದ, ಮೂಢನೇನೋ ಎಂಬ ಅನುಮಾನಕ್ಕೆಡೆಯಾಗುತ್ತಿದ್ದನು.

ಪೇರಾಪುರದ ನಾರ್ಣಯ್ಯನ ಮಗಳು ನಾಗಲಕ್ಷ್ಮಿಯನ್ನು 'ಹುಡುಗಿ ನೋಡಲು' ಬರುವುದಾಗಿ ಸಾರಮ್ಮ ಸಮಾಚಾರ ಕಳುಹಿಸಿದಳು. ಅದರಂತೆ ಗೊತ್ತುಮಾಡಿದ ದಿನ ಸಿಂಹಾದ್ರಿಯನ್ನು ಕರೆದುಕೊಂಡು ಹೊರಟಳು, ಅಲ್ಲಿ ಅವನು ಹೇಗೆ ನಡೆದುಕೊಳ್ಳಬೇಕೆಂಬುದು ಗಿಣಿಗೆ ಹೇಳಿದಂತೆ ಹೇಳಿದಳು.

ಅವರಿಬ್ಬರೂ ಪೇರಾಪುರವನ್ನು ತಲಪಿದ ಕೂಡಲೇ, ಅವರಿಗೆ ಮನೆ ಹುಡುಕುವ ಕಷ್ಟ ಬಾರದಂತೆ ಕರೆದುಕೊಂಡು ಹೋಗಲು ಕಾದಿದ್ದ ನಾರ್ಣಯ್ಯ ಅವರನ್ನು ಇದಿರುಗೊಂಡು ಮಾತಾಡಿಸುತ್ತ ತನ್ನ ಮನೆಗೆ ಕರೆದೊಯ್ದನು. ದಾರಿಯಲ್ಲಿ ಒಂದು ಕಡೆಯಲ್ಲಿ ಅವರನ್ನು ನಿಲ್ಲಿಸಿ ಒಂದು ಮನೆಯೊಳಗೆ ಪ್ರವೇಶಿಸಿದನು.

ಅಷ್ಟರಲ್ಲಿ ಒಬ್ಬಳು ಹುಡುಗಿ ಆ ಮನೆಯೊಳಗಿನಿಂದ ಹೊರಗೆಬಂದು ಬಾಗಿಲಲ್ಲಿ ನಿಂತಳು. ತುಂಬ

ಆರ್. ಎಸ್. ನಾರಾಯಣಮೂರ್ತಿ

ಚೆಲುವೆಯಾಗಿ ಕಂಡ ಅವಳನ್ನು ನೋಡಿ ಸಿಂಹಾದ್ರಿ ಗಬಗಬನೆ ಅವಳ ಹತ್ತಿರ ಹೋಗಿ "ನೀನೇನಾ ನಾಗಲಕ್ಷ್ಮಿ?" ಎಂದು ಕೇಳಿದನು. ಅವಳು ಏನೂ ಹೇಳದೆ ಒಳಗೆ ಹೋದಳು.

ಎತ್ತಲೋ ನೋಡಿಕೊಂಡಿದ್ದ ಸಾರಮ್ಮ, ತನ್ನ ಬಳಿಯಲ್ಲಿದ್ದ ಸಿಂಹಾದ್ರಿ ನಾರ್ಣಯ್ಯ ಹೋದ ಮನೆಯ ಬಾಗಿಲ ಹತ್ತಿರ ಇರುವುದನ್ನು ನೋಡಿ, "ಏಕೋ ಅಲ್ಲಿಗೆ ಹೋದೆ?" ಎಂದು ಕೇಳಿದಳು.

ಸಿಂಹಾದ್ರಿ ಅವಳ ಬಳಿಗೆ ಬಂದು ನಡೆದ ಸಂಗತಿಯನ್ನು ಹೇಳಿದನು. "ತಪ್ಪು ಮಗಾ. ಹಾಗೆ ಕೇಳುತ್ತಾರೇನೋ ಯಾರಾದರೂ?" ಎಂದಳು.

ಅಷ್ಟರಲ್ಲಿ ನಾರ್ಣಯ್ಯ ಬಂದು ಅವರನ್ನು ತನ್ನ ಮನೆಗೆ ಕರೆದುಕೊಂಡು ಹೋದನು. ಅಲ್ಲಿ ಅವರು ಕೈಕಾಲು ಮುಖ ತೊಳೆದುಕೊಂಡರು. ಆಗ ಸಿಂಹಾದ್ರಿ ತುಸು ದೂರದಲ್ಲಿ ಕಾಣಿಸಿದ ಒಬ್ಬಳು ಹುಡುಗಿಯನ್ನು ನೋಡಿ, ಅವನಿಗೆ ನೀರುಕೊಟ್ಟ ನಾರ್ಣಯ್ಯನ ಮಗ ಬಾಲಪ್ಪನ ಹತ್ತಿರ, "ಅವಳೇನಾ ನಾಗಲಕ್ಷ್ಮಿ?" ಎಂದು ಕೇಳಿದ.

ಬಾಲಪ್ಪ ಸುಮ್ಮನೆ ನಕ್ಕನೇ ಹೊರತು ಯಾವ ಉತ್ತರವನ್ನೂ ಕೊಡದೆ, ಹೊರಟು ಹೋದನು.

ಆಮೇಲೆ ಹುಡುಗಿ ನೋಡುವ ಪ್ರಕರಣ ಪ್ರಾರಂಭವಾಯಿತು. ನಾರ್ಣಯ್ಯ, ಬಾಲಪ್ಪ, ಸಿಂಹಾದ್ರಿ ಒಂದು ಬದಿಯಲ್ಲಿ ಕುಳಿತುಕೊಂಡರು. ಯಾವಳೋ ಒಬ್ಬಳು ಹುಡುಗಿ ಬಂದು ಇವರಿಗೆ ಸ್ವಲ್ಪ ದೂರದಲ್ಲಿ ನಿಂತುಕೊಂಡಳು.

"ಅವಳೇ ನಾಗಲಕ್ಷ್ಮಿಯಾ?" ಎಂದು ಸಿಂಹಾದ್ರಿ ನಾರ್ಣಯ್ಯನನ್ನು ಕೇಳಿದನು.

ನಾರ್ಣಯ್ಯ ಬಾಯಿ ತೆರೆದು ಏನೂ ಹೇಳದೆ ಮುಗುಳುನಗು ಹೊರಡಿಸಿದನು. ಮತ್ತೆ ಸ್ವಲ್ಪ ಹೊತ್ತಿಗೆ ಜಡೆತುಂಬಾ ಹೂವುಗಳ ಅಲಂಕಾರದೊಂದಿಗೆ, ಹೊಸ ಶೀರೆ ರವಿಕೆಗಳಿಂದ ಸ್ಥೂಲಕಾಯ



ಳಾಗಿರುವ ಯುವತಿಯನ್ನು ಕರೆದುತಂದು ಇದಿರಿನಲ್ಲಿದ್ದ ಚಾಪೆಯಲ್ಲಿ ಕೂಡಿಸಿದರು. ಅವಳನ್ನು ಕರೆ ತಂದ ಹೆಂಗುಸು ಅವಳ ಬದಿಯಲ್ಲೇ ಕುಳಿತಳು.

"ಇದೇನ್ರೀ ವಿಚಿತ್ರ? ಮದುಮಗಳಿಗೆ ಅಲಂಕಾರ ಮಾಡುವ ಬದಲಿಗೆ ಅವಳ ತಾಯಿಗೆ ಅಲಂಕರಿಸಿದ್ದೀರಲ್ಲಾ?" ಎಂದು ಸಿಂಹಾದ್ರಿ ನಾರ್ಣಯ್ಯನನ್ನು ಕೇಳಿದನು.

"ಸಿಂಹಾದ್ರೀ, ಆ ಬದಿಯಲ್ಲಿ ಕುಳಿತಿರುವವಳು ಮದುಮಗಳಲ್ಲವಯ್ಯ! ಮದುಮಗಳ ತಾಯಿ! ನನ್ನ ಹೆಂಡತಿ!" ಎಂದನು ನಾರ್ಣಯ್ಯ.

ಸಿಂಹಾದ್ರಿ ಸ್ಥೂಲಕಾಯದ ಯುವತಿಯನ್ನು ತೋರಿಸಿ, "ಹಾಗಾದರೆ ಅವಳಾರು?" ಎಂದು ಮೆಲ್ಲಗೆ ಕೇಳಿದನು ನಾರ್ಣಯ್ಯನೊಂದಿಗೆ.

"ಮದುಮಗಳು!" ಎಂದ ನಾರ್ಣಯ್ಯ.

"ಈ ಮೊದ್ದು! ನಾನೊಲ್ಲೆ, ನನಗೆ ಬೇಡ!" ಎಂದು ಹೇಳಿ, ಆಗಲೇ ಒಳಗಿನಿಂದ ಬರುತ್ತಿದ್ದ ತನ್ನ

ತಾಯಿ ಸಾರಮ್ಮನೊಂದಿಗೆ, "ಅಮ್ಮಾ, ನನಗೆ ಈ ಮದುವೆ ಬೇಡ. ಈ ಮೊದ್ದನ್ನು ನಾನು ಮಾಡಿಕೊಳ್ಳಲಾರೆ!" ಎಂದನು ಸಿಂಹಾದ್ರಿ. ಅವನ ಒದರಾಟ ನೋಡಿ ನಾರ್ಣಯ್ಯ ನಗುತ್ತ, "ಸಿಂಹಾದ್ರೀ! ನೀನೇ ನನಗೆ ತಕ್ಕ ಅಳಿಯ ಕಣೋ!" ಎಂದನು.

"ಅಳಿಯನೂ ಇಲ್ಲ, ಗಿಳಿಯನೂ ಇಲ್ಲ. ಎಲ್ಲಾ ಮೋಸ! ಮಂಗಾಟ! ನಾನು ನನಗೆ ಹಿಡಿಸದ ಹುಡುಗೀನ ಎಷ್ಟು ಮಾತ್ರಕ್ಕೂ ಮಾಡಿಕೊಳ್ಳಲಾರೆ! ನನ್ನನ್ನು ಏನಂದುಕೊಂಡಿರಿ ನಾರ್ಣಯ್ಯನವರೇ?" ಎಂದು ಸಿಂಹಾದ್ರಿ ಖಂಡಿತ ಸ್ವರದಲ್ಲಿ ಹೇಳಿದನು.

ನಾರ್ಣಯ್ಯ ಮತ್ತಿಷ್ಟು ಗಟ್ಟಿಯಾಗಿ ನಕ್ಕು, "ಹೆದರಬೇಡವೋ ಸಿಂಹಾದ್ರೀ! ಆ ಅಲಂಕಾರ ಮಾಡಿ ಕೂತ ಹುಡುಗಿ ಮದುವೇಹುಡುಗಿ ಅಲ್ಲ. ನಡೆದ ಸಂಗತಿ ಏನು ಅಂತ ಈಗ ಸ್ಪಷ್ಟ ಹೇಳುತ್ತೇನೆ. ನೀವು ಇಲ್ಲಿಗೆ ಹುಡುಗಿ ನೋಡಲು ಬರುವಿರೆಂದು ಗೊತ್ತಾಗಿ ಯಾರೋ ನಿಮಗೆ ಆಗದವರೂ ಅಂತ ಕಾಣುತ್ತೆ, ನಿನ್ನ ಮೇಲೆ ಇಲ್ಲದ ಹೊಲ್ಲದ ದೂರು ಹೇಳಿದರು. ಅದು ನಿಜವೋ ಸುಳ್ಳೋ ನೋಡಿ ಬಿಡುವಾ ಅಂತಲೇ ದಾರಿಯಲ್ಲಿ ನಿನ್ನನ್ನು ಮಾತಾಡಿಸಿ ಕೊಂಡು ಬಂದೆ. ನಿನ್ನ ಮಾತುಕತೆ ನಡತೆಗಳಲ್ಲಿ ನನಗೇನೂ ಲೋಪ ಕಾಣಿಸಲಿಲ್ಲ. ದಾರಿಯಲ್ಲಿ ಒಂದು ಮನೆಯೊಳಗೆ ನಾನು ಹೋದೆನಷ್ಟೆ? ಆ ಮನೆಯ ಬಾಗಿಲಲ್ಲಿ ನೀನು ನೋಡಿದವಳು ನನ್ನ ಮಗಳೇ. ನಾಗಲಕ್ಷ್ಮಿ ಅವರ ಮನೆಗೆ ಹೋಗಿದ್ದಳಂತೆ. ಮದುಮಗಳನ್ನು ಯಾವಾಗ ಕಂಡೇನೋ ಎಂಬ ನಿನ್ನ ಆತುರವನ್ನು ನೋಡಿ, ಸ್ವಲ್ಪ ತಮಾಷೆ ಮಾಡಿ ನಿನ್ನನ್ನು ಕುರಿತು ಇನ್ನೂ ಹೆಚ್ಚು ತಿಳಿಯೋಣವೆಂದು ಈ ನಾಟಕ ಮಾಡಿಸಿದೆ" ಎಂದನು.

ಸಾರಮ್ಮ ನಗುತ್ತಾ "ಓಹೋ! ಈಗಾದರೂ ಹುಡುಗನ ಸಂಗತಿ ಗೊತ್ತಾಯಿತೇ? ಇನ್ನೂ ಸಂದೇಹವೇ?" ಎಂದಳು.

"ಯಾವ ಸಂದೇಹವೂ ಇನ್ನಿಲ್ಲ. ಬಂಗಾರದಂಥ ಅಳಿಯ ಸಿಂಹಾದ್ರಿ. ಅದಕ್ಕೇ ಹುಡುಗಿಯನ್ನು ಕೊಡುವಾಗಲೂ ಪಡೆಯುವಾಗಲೂ ಹೇಳಿಕೆಯ ಮಾತುಗಳಿಗೆ ಬೆಲೆಕೊಡದೆ, ಸ್ವತಃ ಪರೀಕ್ಷಿಸಿ ನೋಡುವುದು ಒಳ್ಳೆಯದೆಂದು ದೊಡ್ಡವರು ಹೇಳುತ್ತಾರೆ" ಎಂದ ನಾರ್ಣಯ್ಯ.

ಆಗಲೇ ನಾಗಲಕ್ಷ್ಮಿಯನ್ನು ಮದುಮಗಳ ಅಲಂಕಾರ ಮಾಡಿಸಿ ಅಲ್ಲಿಗೆ ಕರೆತಂದರು. ಹುಡುಗಿಯನ್ನು ನೋಡಿ ಸಾರಮ್ಮನಿಗೆ ತೃಪ್ತಿಯಾಯಿತು. ಸಿಂಹಾದ್ರಿಯ ಸಂತೋಷವಂತೂ ಹೇಳುವುದೇ ಬೇಡ. ತನ್ನ ಅಳಿಯನಾಗುವವನು ಎಲ್ಲರೂ ಹೇಳುವ ಹಾಗೆ ಬುದ್ಧಿಹೀನನಲ್ಲವೆಂದು ತಿಳಿದು ನಾರ್ಣಯ್ಯನಿಗೂ ತೃಪ್ತಿಯಾಯಿತು.







# ರಾಕ್ಷಸಿಯ ಗುರು

ಅನೇಕ ವರ್ಷಗಳ ಹಿಂದೆ ಒಂದಾನೊಂದು ಊರಿನ ಒಬ್ಬ ಗೌಡನ ಮನೆಯಲ್ಲಿ ಆನಂದನೆಂಬ ಅನಾಥನು ಎಲ್ಲಾ ಕೆಲಸಗಳನ್ನೂ ಮಾಡಿಕೊಂಡಿದ್ದನು. ಕಡೆಗೆ ರಾತ್ರಿಯಲ್ಲಿ ಪಶುಗಳ ದೊಡ್ಡಿಯಲ್ಲಿ ಹುಲ್ಲೂ ಹರಡಿಕೊಂಡು ಮಲಗಿ ಅರ್ಧ ರಾತ್ರಿಯ ವರೆಗೂ ಹಾಡುತ್ತಾ ಇದ್ದು; ಆ ಮೇಲೆ ನಿದ್ದೆ ಮಾಡುವನು. ಇದು ಅವನ ಬಿಡಲಾಗದ ಅಭ್ಯಾಸ.

ಅವನ ಕಂಠ ಕಂಠೋರವಾಗಿರುತ್ತಿತ್ತು. ಆ ಕರ್ಕಶ ರವದ ಹಾಡು ಗೌಡನಿಗೂ ಗೌಡನ ಹೆಂಡತಿಗೂ ತುಂಬಾ ಸಂಕಟವನ್ನುಂಟು ಮಾಡುತ್ತಿತ್ತು. ಆದರೆ ಅವನು ಸ್ವಲ್ಪವೂ ಸೋಮಾರಿತನವಿಲ್ಲದೆ ಕೆಲಸ ಮಾಡುವವನಾದುದರಿಂದ ಹೇಗೋ ಅವನ ಹಾಡನ್ನು ತಾಳಿಕೊಂಡಿದ್ದರು.

ತನ್ನ ಹಾಡನ್ನು ಕೇಳಿ ಎಲ್ಲರೂ ಕಿವಿಮುಚ್ಚಿ ಕೊಳ್ಳುತ್ತಾರೆಂದು ಆನಂದನಿಗೆ ಗೊತ್ತಿತ್ತು. "ಅರ್ಧ ರಾತ್ರಿಯ ವರೆಗೆ ಕತ್ತೆ ಓಂಢ್ರಿಸಿದ ಹಾಗೆ ಕೂಗುತ್ತ ನಮ್ಮ ಪ್ರಾಣ ತೆಗೀ ಬೇಡ್ವೋ" ಎಂದು ಗೌಡನೂ, ಗೌಡನ ಹೆಂಡತಿಯೂ ಬೈದು ಹೇಳಿ ಸಾಕಾಗಿ ಬಿಟ್ಟಿದ್ದರು. ತನ್ನ ಹಾಡನ್ನು ಯಾರಾದರೂ ಬೈದರೆ ಆನಂದನಿಗೆ ನೋವಾಗುತಿತ್ತು. ಹೀಗಿರುವಾಗ ಗೌಡನಿಗೆ ಒಬ್ಬ ಮಗನು ಹುಟ್ಟಿದನು. ಆ ಸಣ್ಣ ಮಗು ಆನಂದನ ಹಾಡು ಕೇಳಿದರೆ ಕಿರುಚುತಿತ್ತು. ಹೀಗೆ ಅನೇಕ ಸಾರಿ ನಡೆದ ಮೇಲೆ ಗೌಡಿತಿ ಆನಂದನೊಂದಿಗೆ, "ನೀನು ಹಾಡುವುದನ್ನು ಬಿಡದಿದ್ದರೆ ಕೆಲಸವನ್ನು ಬಿಟ್ಟು ಹೋಗಪ್ಪ" ಎಂದು ನಿಷ್ಕರ್ಷೆಯಿಂದ ಹೇಳಿಬಿಟ್ಟಳು. ಗೌಡನು ಅವನ ಲೆಕ್ಕಾಚಾರ ತೀರಿಸಲು, ಟೋಂಕದಿಂದ ಹಣದ ಚೀಲ ತೆಗೆದು ಹೆಂಡತಿಗೆ ಕೊಟ್ಟನು.

ಕೆಲಸಬಿಟ್ಟು ಹೋಗು ಅಂದುದಕ್ಕಿಂತಲೂ ಹಾಡುವುದನ್ನು ಬಿಡಬೇಕೆಂದು ಹೇಳಿದ್ದೇ ಆನಂದನಿಗೆ ಹೆಚ್ಚಿನ ಅಭಿಮಾನ ಚುಚ್ಚಿಕೊಂಡೆದ್ದಿತು. ಅವನು ಕೂಡಲೇ ಗೌಡನ ಮನೆಯನ್ನು ಬಿಟ್ಟು ಹೊರಟು, ಕಾಡಿನ ದಾರಿ ಹಿಡಿದನು. ಮರಬಳ್ಳಿಗಳೂ, ಕಲ್ಲು ಬಂಡೆಗಳೂ, ಮೃಗಪಕ್ಷಿಗಳೂ ಸಂಗೀತಕ್ಕೆ ತಲೆಯಾಡಿಸುತ್ತವೆಂದು, ಯಾರೋ ಹೇಳಿದುದನ್ನು ಕೇಳಿ ನೆನಪಿಟ್ಟುಕೊಂಡಿದ್ದನು.

ಅವನು ಕಾಡಿನೊಳಗಿರುವಾಗಲೇ ರಾತ್ರಿಯೂ ಆಯಿತು. ಅಲ್ಲಲ್ಲಿ ಹಿಟ್ಟು ಚೆಲ್ಲಿದಂತೆ ಆಕಾಶ

ಎಂ. ಕೆ. ಈಶ್ವರರಾವ್



ಒಂದು ಹೊಸ ಆಲೋಚನೆ ಬಂತು. ಇವನಾವನೋ ತುಂಬಾ ಶ್ರವಣಾನಂದಕರವಾಗಿ ಹಾಡುತ್ತಿದ್ದಾನೆ. ತನ್ನ ಮಗಳಿಗೆ ಹಾಡು ಕಲಿಸಿಬಿಟ್ಟರೆ ಅವಳ ಹಾಡು ಕೇಳಿ ಸಂತೋಷಪಟ್ಟು ಯಾವನಾದರೂ ಮದುವೆ ಮಾಡಿಕೊಂಡಾನು. ನಾಟ್ಯ ಕೂಡಾ ಕಲಿಸೋಣ ವೆಂದರೆ ಹುಡುಗಿಯದು ತುಂಬಾ ಸ್ಥೂಲಕಾಯ.

ಆನಂದನ ಗೊಗ್ಗರಗೊರಳಿನ ಸ್ವರವು ರಾಕ್ಷಸಿಗೆ ಬಹಳ ನಾಜೂಕಾಗಿ ಕೇಳುತಿತ್ತು. ಅವನಿಂದ ತನ್ನ ಮಗಳಿಗೆ ಸಂಗೀತ ಕಲಿಸಬೇಕೆಂದು ನಿಶ್ಚಯಿಸಿಕೊಂಡು, ಸಪ್ಪಳಿಲ್ಲದೆ ಬಂದು ಆನಂದನಿಗೆ ಎಚ್ಚರವಾಗ ದಂತೆಯೇ ಎತ್ತಿಕೊಂಡು ಹೋಗಿ, ತನ್ನ ಗುಹೆಯೊಳಗೆ ಮಗಳ ಮುಂದೆ ಇಟ್ಟಳು.

"ನರಮಾಂಸ ನನಗೆ ಹಿಡಿಸೋದಿಲ್ಲ ಅಂದಿದ್ದೆನಲ್ಲಾ? ಇವನನ್ನು ಏಕೆ ತಂದೆ?" ಎಂದು ಆ ಪ್ರಿಯ ಮಗಳು ತಾಯಿಯೊಂದಿಗೆ ಕೇಳಿದಳು.

"ತಿನ್ನಲಿಕ್ಕೆ ತಂದದ್ದಲ್ಲವೇ ಹುಚ್ಚೀ! ಇವನು ದೊಡ್ಡ ಸಂಗೀತ ವಿದ್ವಾಂಸ. ನಿನಗೆ ಸಂಗೀತ ಕಲಿಸು ತ್ತಾನೆ ಗೊತ್ತಾ? ನಿನ್ನ ಹಾಡನ್ನು ಕೇಳಿ ನಿನ್ನನ್ನು ಮದುವೆಯಾಗಲು ಎಷ್ಟು ಮಂದಿ ಬರುತ್ತಾರೇದು ಆ ಮೇಲೆ ನಿನಗೇ ಗೊತ್ತಾಗುತ್ತದೆ" ಎಂದಳು ತಾಯಿ ರಾಕ್ಷಸಿ. "ಒಹೋ! ಮದುವೇನಾ! ಒಳ್ಳೇದಮ್ಮಾ!" ಎಂದು ಸಂತೋಷದಿಂದ ನಲಿ ದಾಡಿದಳು ರಾಕ್ಷಸಿ ಹುಡುಗಿ.

ಈ ಕೋಲಾಹಲ ಕೇಳಿ ಆನಂದನು ಎಚ್ಚೆತ್ತು ಹಾರಿ ಎದ್ದು ಕುಳಿತು ತಾಯಿ ರಾಕ್ಷಸಿಯನ್ನೂ, ಮಗಳು ರಾಕ್ಷಸಿಯನ್ನೂ ನೋಡಿ ಹೆದರಿ ಕೂಗಿದನು.

ತಾಯಿರಾಕ್ಷಸಿ ಅವನೊಂದಿಗೆ, "ಹೆದರಬೇಡವೋ ಮಾನವಾ. ಕಾಡಿನಲ್ಲಿ ನೀನು ಹಾಡುತ್ತಿರುವುದನ್ನು ಕೇಳಿ ಬಹಳ ಸಂತೋಷವಾಯಿತು. ಪ್ರಪಂಚದಲ್ಲಿ ನಿನ್ನಂಥಾ ಹಾಡುಗಾರನು ಇನ್ನೊಬ್ಬನಿಲ್ಲ. ನನ್ನ ಮಗಳಿಗೆ ಆ ಹಾಡುಗಳನ್ನು ಕಲಿಸಿಕೊಟ್ಟು ಪುಣ್ಯ

ದಲ್ಲಿದ್ದ ಪೂರ್ಣ ಚಂದ್ರನಿಂದ ಬೆಳದಿಂಗಳು ಸುರಿಯು ತ್ತಿತ್ತು. ಗಾಳಿಯಲ್ಲಿ ಏನೇನೋ ಹೂವುಗಳ ಸುವಾಸನೆ ಬೆರೆತು ಬೀಸುತಿತ್ತು. ಇದೆಲ್ಲಾ ಆನಂದನಿಗೆ ಬಹಳ ಉತ್ಸಾಹದಾಯಕವಾದುವು. ಅಲ್ಲಿ ತನ್ನ ಹಾಡು ಕೇಳಿ ಬಯ್ದಾಡುವವರು ಯಾರೂ ಇಲ್ಲ ವೆಂದುಕೊಂಡು, ಒಂದು ಬಂಡೆಗಲ್ಲ ಮೇಲೆ ಒರಗಿದ ಹಾಗೆ ಕುಳಿತು ಕಂಠವೆತ್ತಿ ಹಾಡ ತೊಡಗಿದನು.

ಎಷ್ಟು ಹೊತ್ತು ಹಾಡಿದನೋ ಅವನಿಗೇ ತಿಳಿಯದು. ನಿದ್ದೆಬರುವವರೆಗೂ ಅವನು ಹಾಡುವು ದನ್ನು ಒಬ್ಬಳು ರಾಕ್ಷಸಿ ಕಿವಿಗೊಟ್ಟು ಕೇಳುತ್ತಾ ಇದ್ದಳು. ಅವಳಿಗೆ ಅವನ ಹಾಡು ತುಂಬಾ ಹಿಡಿಸಿತು. ಆ ರಾಕ್ಷಸಿಗೆ ಮದುವೆಯ ವಯಸ್ಸಿಗೆ ಬಂದ ಒಬ್ಬಳು ಮಗಳಿದ್ದಳು. ಆದರೆ ಆ ರಾಕ್ಷಸ ಹುಡುಗಿ ತೀರಾ ಅನಾಕಾರಿಯಾಗಿದ್ದುದರಿಂದ ಯಾವ ರಾಕ್ಷಸ ಯುವಕನೂ ಅವಳನ್ನು ಮದುವೆಯಾಗಲು ಮುಂದೆ ಬರಲಿಲ್ಲ. ಆನಂದನ ಹಾಡು ಕೇಳುತ್ತಿದ್ದಾಗ ರಾಕ್ಷಸಿಗೆ

ಕಟ್ಟಿಕೊಳ್ಳಪ್ಪಾ. ನಿನ್ನ ಕಷ್ಟಕ್ಕೆ ಒಂದು ಚೀಲ ಬಂಗಾರ ಕೊಡುತ್ತೇನೆ." ಎಂದಳು.

ಆನಂದನ ಭಯ ಹಾರಿ ಹೋಗಿ, ಆಸ್ಥಳದಲ್ಲಿ ಸಂತೋಷ ತಳಗೊಂಡಿತು. ಇಷ್ಟು ಕಾಲದ ಮೇಲೆ ತನ್ನ ಹಾಡನ್ನು ಮೆಚ್ಚಿಕೊಳ್ಳುವವರಿರುವುದನ್ನು ನೋಡಿ ಸಂತೋಷದಿಂದ ಪರವಶನಾದನು.

"ಮನುಷ್ಯರು ಪಶುಗಳಿಗಿಂತ ಹೀನರು. ನಿಮ್ಮ ರಾಕ್ಷಸರಿಗೇ ಕಲೆಗಳ ಮೇಲೆ ಗೌರವ ಹೆಚ್ಚು!" ಎಂದು ಅವನು ರಾಕ್ಷಸಿಯನ್ನು ಮೆಚ್ಚಿಕೊಂಡನು.

ಆನಂದನು ಅವಳು ಕೇಳಿಕೊಂಡುದಕ್ಕೆ ಸಂತೋಷ ವಾಗಿ ಒಪ್ಪಿಕೊಂಡನು. ಬೆಳಗಾಗುವ ವೇಳೆ ಸಮೀಪಿ ಸುವುದನ್ನು ನೋಡಿ, "ನಮಗೆ ನಿದ್ರೆಯ ಹೊತ್ತು ಸಮೀಪಿಸಿತು. ನೀನು ನಿನ್ನ ಇಷ್ಟ ಬಂದ ಹಾಗೆ ಕಾಡಿನಲ್ಲಿ ತಿರುಗಾಡುತ್ತಿದ್ದು, ರಾತ್ರಿಯಲ್ಲಿ ನನ್ನ ಮಗಳಿಗೆ ಹಾಡು ಕಲಿಸುತ್ತಿರು. ನಿನಗೆ ಯಾವ ಕೊರತೆಯೂ ಬಾರದಂತೆ ನಾನು ನೋಡಿಕೊಳ್ಳು ತ್ತೇನೆ" ಎಂದಳು ರಾಕ್ಷಸಿ.

ಬೆಳಗಾಗುವಾಗ ಅವರಿಬ್ಬರೂ ನಿದ್ದೆಗೆ ಉಪಕ್ರಮಿ ಸಿದ ಮೇಲೆ ಆನಂದನು ಅಡವಿಯೊಳಗೆಲ್ಲಾ ತಿರು ಗಾಡುತ್ತ, ಹಣ್ಣು ಹಂಪಲುಗಳಿಂದ ಹೊಟ್ಟೆ ತುಂಬಿಸಿ ಕೊಳ್ಳುತ್ತ, ಹಗಲುಹೊತ್ತನ್ನು ಕಳೆದು ರಾತ್ರಿಯಲ್ಲಿ ರಾಕ್ಷಸಿಯ ಗುಹೆಗೆ ಬಂದು, ಬೆಳತನಕ ರಾಕ್ಷಸಿಯ ಗುರುವಾಗಿ ಸಂಗೀತ ಹೇಳಿಕೊಡಲು ಸಿದ್ಧನಾದನು. ಅವರಿಬ್ಬರೂ ಸಂಗೀತದಲ್ಲಿರುವಾಗ, ತಾಯಿ ರಾಕ್ಷಸಿ ಕಾಡಿನೊಳಗೆ ತಿರುಗಾಡಲು ಹೋದಳು.

ಹುಡುಗಿ ರಾಕ್ಷಸಿ ಭಕ್ತಿಯಿಂದ ಆನಂದನ ಕಾಲು ಗಳನ್ನು ಕಣ್ಣಿಗೊತ್ತಿಕೊಂಡು, ಚರ್ಮಗಳ ಮೇಲೆ ಸಂಗೀತ ಪಾಠಕ್ಕೆ ಕುಳಿತುಕೊಂಡಳು. ಆನಂದನು ಅವಳಿಗೆ ಒಂದು ಪಲ್ಲವಿಯನ್ನು ಹೇಳಿ, ಅದನ್ನೇ ಪದೇ ಪದೇ ಹೇಳಿಸಿದನು. ಆದರೆ ರಾಕ್ಷಸಿಯ ಮಗಳ ಕಂಠದಿಂದ ಹೊರಡುವಂಥಾದ್ದು ಅವನಿಗೆ



ಸಂಗೀತದ ಹಾಗೆ ಕೇಳಲೇ ಇಲ್ಲ. ಗುಡ್ಡದ ಮೇಲಿ ನಿಂದ ಬಂಡೆಗಲ್ಲುಗಳ ರಾಶಿ ಉರುಳಿ ಬೀಳುವಂತೆ ತೋರಿ ಅವನಿಗೆ ಭಯವಾಯಿತು.

ಅವನು ತನ್ನ ಕಿವಿಗಳನ್ನು ಮುಚ್ಚಿಕೊಂಡು, "ಹಾಗೆ ಗಂಟಲು ಹರಿದುಕೊಳ್ಳಬೇಡ, ಸ್ವಲ್ಪ ಮೆಲ್ಲಗೆ, ಸಣ್ಣ ದನಿಯಿಂದ ಹಾಡು!" ಎಂದು ಆನಂದನು ಮತ್ತೆ ಮತ್ತೆ ಅವಳಿಗೆ ಹೇಳುತ್ತಿದ್ದನು.

ಹುಡುಗಿ ರಾಕ್ಷಸಿ ಇನ್ನಿಷ್ಟು ಭೀಕರವಾಗಿ ಕಂಠಸ್ವರ ಹೊರಡಿಸಿದಳು. ಅದನ್ನು ಕೇಳಿ ಆನಂದನ ಹೊಟ್ಟೆ ಯೊಳಗೆ ಸೌಟು ಹಾಕಿ ಮಗಚುವ ಹಾಗಾಯಿತು. ಹೇಗೋ ಸಹಿಸಿಕೊಂಡು ಒಂದು ಹಾಡನ್ನು ಪೂರ್ತಿ ಅವಳಿಗೆ ಹೇಳಿಕೊಟ್ಟು, ಸ್ವಲ್ಪ ನಿದ್ದೆ ಮಾಡೋಣ ವೆಂದು ಪ್ರಯತ್ನಿಸಿದನು. ಆದರೆ ಅವಳು ಹಾಡನ್ನು ಸಾಧನೆ ಮಾಡುತ್ತಿದ್ದಾಗ ಅವನಿಗೆ ರೆಪ್ಪೆ ಮುಚ್ಚಲು ಸಾಧ್ಯವಾಗಲಿಲ್ಲ. ಅಷ್ಟರಲ್ಲಿ ತಾಯಿ ರಾಕ್ಷಸಿ ಎರಡು ಜಿಂಕೆಗಳನ್ನು ಕೊಂದು ಹಿಡಿದುಕೊಂಡು ಗುಹೆಯೊಳಗೆ

ಬಂದು, "ನನ್ನಮ್ಮ ಬಂಗಾರಿಯಾ ಹಾಡೋದು? ಯಾವ ಕೋಗಿಲೆಯೋ ಗುಹೆಯೊಳಗೆ ತೂರಿ ಹಾಡುತ್ತೇ ಅಂದುಕೊಂಡೆನಲ್ಲೇ! ಒಂದೇ ದಿನದಲ್ಲಿ ಎಷ್ಟು ಚೆನ್ನಾಗಿ ಕಲಿತೆಯಲ್ಲೇ! ನನ್ನ ಮುದ್ದೂ!" ಎನ್ನುತ್ತ ಮಗಳನ್ನು ಅಪ್ಪಿ ಮುದ್ದಾಡಿದಳು.

ಹೀಗೆ ಆನಂದನಿಗೆ ಆ ಗುಹೆ ದೊಡ್ಡ ನರಕವೇ ಆಯಿತು. ರಾಕ್ಷಸಿಯ ಹಾಡಿನ ರಗಳೆಯಲ್ಲಿ ಅವನಿಗೆ ನಿದ್ದೆಯೇ ಇಲ್ಲ. ಅವಳ ಕಂಠಸ್ವರ ಕೇಳಿದಾಗಲೆಲ್ಲಾ ಅವನ ಶರೀರದ ಮೇಲೆ ಹಾವು ಚೇಳುಗಳು ಹರಿದಾಡುವಂತೆನಿಸುತ್ತಿದ್ದುವು.

ಒಂದು ದಿನ ಅವನು ಸಾಹಸ ಮಾಡಿ ತಾಯಿ ರಾಕ್ಷಸಿಯೊಂದಿಗೆ, "ನನಗೇನೋ ಇವಳ ಕಂಠ ಚೆನ್ನಾಗಿರುವಂತೆ ಕಾಣುವುದಿಲ್ಲ. ಕೆಲವು ದಿನ ಹಾಡು ನಿಲ್ಲಿಸಿದರೇನೇ ಒಳ್ಳೆಯದು" ಎಂದನು.

"ಏನೆಲೋ ಮಾನವಾ! ನಿನಗೆ ಹೊಟ್ಟೇ ಕಿಚ್ಚು ಏಳುತ್ತದೋ? ನಿನ್ನನ್ನು ಮೀರಿಸುವಳೂ ಅಂತ ಹೀಗೋ ಹೇಳೋದು? ಈಸಾರಿ ಅವಳ ಗುರು ಅಂತ ಬಿಟ್ಟಿದ್ದೇನೆ!" ಎಂದಳು ತಾಯಿ ರಾಕ್ಷಸಿ ಕಣ್ಣು ತಿರುಗಿಸುತ್ತ.

ಆನಂದನು ಮತ್ತೇನೂ ಮಾತಾಡಲಿಲ್ಲ. ಕಲೆ ಎಂಬುದು ಕೇವಲ ತನ್ನ ಆತ್ಮಸಂತೃಪ್ತಿಗೆ ಮಾತ್ರವೇ ಅಲ್ಲ. ಅದು ಇತರರನ್ನು ಕೂಡಾ ರಂಜಿಸುವಂತಿರಬೇಕು. ಅದರಲ್ಲಿಯೂ ಇದು ಸಂಗೀತದ ವಿಷಯ! ಬೇರೆ ಕಲೆಗಳನ್ನಾದರೆ ಇನ್ನೊಬ್ಬರಿಗೆ ತಿಳಿಯದಂತೆ ಅಭ್ಯಾಸ ಮಾಡಲು ಸಾಧ್ಯವಿದೆ, ಸಂಗೀತವು ಬೇರೆಯವರಿಗೆ ಕೇಳಿಸುವಂಥಾದ್ದು. ಸ್ವರವು ಘೋರವಾಗಿದ್ದರೆ ಇತರರು ಹೇಗೆ ಸಂಕಟಪಡುವರೆಂದು ಆನಂದನಿಗೆ ಈಗ ಗೊತ್ತಾಗಿದೆ,

ಅಂತೆಯೇ ರಾಕ್ಷಸಿ ಕೊಡುವುದಾಗಿ ಹೇಳಿದ ಬಂಗಾರದ ಚೀಲಕ್ಕಾಗಿ ಕಾದಿರಲು ಸಾಧ್ಯವಾಗದೆ, ಆ ದಿನ ಹಗಲು ರಾಕ್ಷಸಿಯರಿಬ್ಬರೂ ಗಾಢ ನಿದ್ದೆಯಲ್ಲಿರುವಾಗ, ಅವನು ಆ ಕಾಡಿನಿಂದ ಹೊರಬಿದ್ದು ನೇರಾಗಿ ಹಿಂದೆ ಕೆಲಸ ಮಾಡುತ್ತಿದ್ದ ಗೌಡನ ಮನೆಗೇ ಬಂದು ನಿಂತನು.

"ಮತ್ತೆ ಏಕೆ ಬಂದೆಯೋ ಗಾರ್ದಭ ಗಾಯಕಾ?" ಎಂದು ಗೌಡಗೌಡಿತಿಯರು ಅವನನ್ನು ಕೇಳಿದರು.

ಆನಂದನು ಅವರೊಂದಿಗೆ ನಡೆದ ಸಂಗತಿಯನ್ನೆಲ್ಲಾ ಹೇಳಿ, "ನನಗೆ ಬುದ್ಧಿ ಬಂತು. ನನ್ನ ತಪ್ಪನ್ನು ತಿಳಿದುಕೊಂಡೆನು. ನಾನು ಈಗ ಬಂದದ್ದು ಕೆಲಸ ಮಾಡಲಿಕ್ಕೆ. ಹಾಡಲಿಕ್ಕೆ ಅಲ್ಲವೇ ಅಲ್ಲ! ಎಷ್ಟು ಮಾತ್ರಕ್ಕೂ ಇನ್ನು ಹಾಡಲಾರೆ" ಎಂದನು. ಅವನು ಅಲ್ಲಿಯೇ ಕೆಲಸಗಾರನಾಗಿದ್ದು ಹಾಡುವ ಅಭ್ಯಾಸ ಬಿಟ್ಟರೂ "ರಾಕ್ಷಸಿಯ ಗುರು" ಎಂಬ ಅಡ್ಡ ಹೆಸರು ಬಂತು ಅವನಿಗೆ.





# ದೇವೀಭಾಗವತ

**ಶ**ರ್ಯಾತಿ ಎಂಬ ಮಹಾರಾಜನಿಗೆ ಸಾವಿರಾರು ಪತ್ನಿಯರಿದ್ದರೂ ಸುಕನ್ಯೆಯೊಬ್ಬಳೇ ಮಗಳು. ಆದುದರಿಂದ ಎಲ್ಲಾ ತಾಯಂದಿರೂ ಸೇರಿ ಸುಕನ್ಯೆಯನ್ನು ಅತ್ಯಂತ ಮಮತೆಯಿಂದ ಬೆಳೆಯಿಸಿದರು. ಅವಳೂ ಭಯುವರಿಯದೆ ಬೆಳೆದು ದೊಡ್ಡವಳಾದಳು.

ರಾಜಧಾನಿಯ ಹೊರಗೆ ಸುಂದರವಾದೊಂದು ತಟಾಕವಿದ್ದಿತು. ಆ ತಟಾಕಕ್ಕೆ ಸಮೀಪವಿರುವ ವನದಲ್ಲಿ ಭೃಗುವಂಶದವನಾದ ಚ್ಯವನನೆಂಬ ಮುನಿ, ಅಂಬಾದೇವಿಯನ್ನು ಕುರಿತು ತಪಸ್ಸು ಮಾಡಿಕೊಂಡಿದ್ದನು. ಅವನು ತಪಸ್ಸಿನಲ್ಲಿ ಎಷ್ಟರಮಟ್ಟಿಗೆ ಮಗ್ನನಾಗಿದ್ದನೆಂದರೆ, ಅವನ ಸುತ್ತಲೂ ಹುತ್ತ ವೆದ್ದಿತ್ತು. ಆ ಹುತ್ತವನ್ನು ಅಲ್ಲಲ್ಲಿ ಬಳ್ಳಿಗಳು ಸುತ್ತಿದ್ದುವು.

ಒಂದುದಿನ ಆ ತಟಾಕ ತೀರದ ವನ ಪ್ರಾಂತಕ್ಕೆ ಶರ್ಯಾತಿರಾಜನು ತನ್ನ ಪತ್ನಿಯರೊಂದಿಗೆ ವಿಹಾರ ಮಾಡಲು ಬಂದನು. ಅವರೊಂದಿಗೆ ಬಂದಿದ್ದ ಸುಕನ್ಯೆ ಹೂಗಳನ್ನಾರಿಸುತ್ತ ಪಾತರಗಿತ್ತಿಯಹಾಗೆ ಅತ್ತಿತ್ತ ಓಡುತ್ತ, ಹಾರಿ ಕುಣಿದು ಹೂಗಳನ್ನು ಕೊಯ್ಯುತ್ತ ತನ್ನ ಗೆಳತಿಯರೊಂದಿಗೆ ತಿರುಗಾಡುತ್ತಿದ್ದಳು. ಹೀಗೆ ಸ್ವೇಚ್ಛೆಯಾಗಿ ತಿರುಗಾಡುತ್ತ ಹೋಗಲು, ಅವಳ ಕಣ್ಣಿಗೆ ಚ್ಯವನನ ಹುತ್ತವು ಕಂಡಿತು. ಸುಕನ್ಯೆ ಹುಡುಗಾಟವಾಗಿ ಆ ಹುತ್ತವನ್ನು ಬಗ್ಗಿ ಬಗ್ಗಿ ನೋಡಿದಳು. ಆಗ ಎರಡು ವಸ್ತುಗಳು ಫಳಫಳ ಹೊಳೆಯುವುದನ್ನು ಕಂಡಳು. ಕೂಡಲೇ ಉದ್ದವಾದ ಮುಳ್ಳಿನಿಂದ ಅವುಗಳನ್ನು ಚುಚ್ಚಲು ನೋಡಿದಳು.

ಅದನ್ನು ನೋಡಿ ಹುತ್ತದೊಳಗಿನ ಚ್ಯವನನು "ಲೇ ಹುಡುಗೀ ! ಈ ಹುತ್ತದ ಬಳಿಯಿಂದ ದೂರಹೋಗು. ನಾನು ತಪಸ್ಸಿನಲ್ಲಿದ್ದೇನೆ!" ಎಂದನು.

ಈ ಮಾತು ಎಲ್ಲಿಂದ ಬರುವುದೆಂದು ತಿಳಿಯದೆ, ಹುತ್ತದಾಚೆಗೆ ಯಾರೋ ಇರಬಹುದೆಂದುಕೊಂಡು, ಸುಕನ್ಯೆ ಆಟದ ಆತುರದಲ್ಲಿ ಆ ಮುಳ್ಳಿನಿಂದ ಚ್ಯವನನ ಎರಡು ಕಣ್ಣುಗಳನ್ನೂ ಚುಚ್ಚಿದಳು. ಚುಚ್ಚಿದ

೨೩. ಚ್ಯವನನ ಕಥೆ



ಕೂಡಲೇ ಚುಚ್ಚಬಾರದಿತ್ತು ಎಂದುಕೊಂಡು ಆಚೆಗೆ ಓಡಿಹೋಗಿ ಅದನ್ನು ಮರೆತು ಕ್ರೀಡೋತ್ಸಾಹದಲ್ಲಿ ಮಗ್ನಳಾಗಿ ಬಿಟ್ಟಳು.

ಚ್ಯವನನು ಕಣ್ಣುಗಳ ನೋವನ್ನು ತಾಳಲಾರದೆ ರೋದಿಸಲು ಪ್ರಾರಂಭಿಸಿದನು. ಅದೇ ಸಮಯದಲ್ಲಿ ರಾಜನಿಗೂ ಅವನ ಪರಿವಾರದವರಿಗೂ ಮಲ ಮೂತ್ರಗಳು ಸ್ತಂಭಿಸಿ ಹೋದುವು. ಇದ್ದಕ್ಕಿದ್ದ ಹಾಗೆ ಎಲ್ಲರಿಗೂ ಒಂದೇಸಾರಿ ಶಾಪ ತಗಲಿದ ಹಾಗೆ ಹೀಗಾದುದನ್ನು ನೋಡಿ, ಆಶ್ಚರ್ಯ ಪಡುತ್ತ ಶರ್ಯಾತಿ ರಾಜನು ನಗರಕ್ಕೆ ಹೋದ ಮೇಲೆ ತನ್ನ ಸೈನಿಕರನ್ನು ನೋಡಿ, "ನನಗೇನೋ ಅನುಮಾನವಾಗಿದೆ. ನಮ್ಮ ನಗರದ ಹೊರಗೆ ವನದಲ್ಲಿ ಚ್ಯವನನೆಂಬ ಋಷಿ ತಪಸ್ಸಿನಲ್ಲಿದ್ದಾನೆ. ನಿಮ್ಮಲ್ಲಿ ಯಾರೂ ಅವನಿಗೆ ಉಪದ್ರ ಕೊಡಲಿಲ್ಲ ವಷ್ಟೆ? ಯಾವುದಕ್ಕೂ ನೀವು ಹೋಗಿ ಸ್ವಲ್ಪ ನೋಡಿ ವಿಚಾರಿಸಿಬನ್ನಿ!" ಎಂದನು.

ಆ ಸೈನಿಕರು ವನಕ್ಕೆ ಹೋದ ಸೈನಿಕರನ್ನೆಲ್ಲಾ ವಿಚಾರಿಸಿದರು. ರಾಜನೂ ಸ್ವತಃ ವಿಚಾರಿಸಿದನು. ಎಲ್ಲರೂ ನಮಗೇನೂ ತಿಳಿಯದೆಂದು ಹೇಳಿದರು. ರಾಜನು ಅವರ ಮಾತುಗಳನ್ನು ನಂಬದೆ ನಿಜ ಹೇಳುವಂತೆ ಅವರನ್ನು ಹಿಂಸಿಸ ತೊಡಗಿದನು.

ಆ ಗಲಾಟೆ ಸುಕನ್ಯೆಗೆ ತಿಳಿಯಿತು. ಅವಳು ತಂದೆಯ ಬಳಿಗೆ ಓಡಿಬಂದು, "ಅಪ್ಪಾ, ನಾನು ವನದಲ್ಲಿ ವಿಹರಿಸಿಕೊಂಡಿದ್ದಾಗ ಅಲ್ಲೊಂದು ಹುತ್ತವನ್ನು ನೋಡಿದೆ. ಅದರಲ್ಲಿ ಎರಡು ರಂಧ್ರಗಳು ಹೊಳೆಯುವುದನ್ನು ನೋಡಿ ಆಟದ ಬುದ್ಧಿಯಿಂದ ಮುಳ್ಳುಕಡ್ಡಿಯಿಂದ ತಿವಿದೆ. ಆ ರಂಧ್ರಗಳಿಂದ ನೀರಿಳಿಯುವುದನ್ನೂ, ಏನೋ ಹೀನವಾದ ಆರ್ತನಾದ ಹೊರಟುದನ್ನೂ ನೋಡಿ, ಏನೋ ಎಂಥದೋ ಎಂದು ಆಶ್ಚರ್ಯಪಡುತ್ತ ಅಲ್ಲಿಂದು ಓಡಿ ಬಂದುಬಿಟ್ಟೆ. ನಾನು ಯಾವುದನ್ನು ತಿವಿದೆನೋ ನನಗೆ ಗೊತ್ತಿಲ್ಲ ಅಪ್ಪಾ!" ಎಂದಳು.

ಮಹಾಮುನಿಗೆ ನಡೆದ ಅಪಚಾರವು ಇದೇ ಆಗಿರಬೇಕು ಎಂದುಕೊಂಡು, ರಾಜನು ಕೂಡಲೇ ಚ್ಯವನನಿರುವ ಸ್ಥಳಕ್ಕೆ ಹೋಗಿ ಹುತ್ತವನ್ನು ತೊಲಗಿಸಿ, ಕಣ್ಣು ಕಾಣದೆ ಸಂಕಟಪಡುತ್ತಿರುವ ಮುನಿಯ ಮುಂದೆ ಸಾಷ್ಟಾಂಗ ಪ್ರಣಾಮ ಮಾಡಿ, "ಮಹಾತ್ಮಾ! ತಿಳಿಯದೆ ನನ್ನ ಮಗಳು ನಿನಗೆ ಮಾಡಿದ ಹಾನಿಗೆ ಕೋಪ ಮಾಡಬಾರದು. ನಿಮ್ಮಂಥಾ ತಾಪಸಿಗಳು ಕೋಪದಿಂದ ಶಾಪ ಕೊಡಬಾರದು" ಎಂದು ಬೇಡಿಕೊಂಡನು.

ಆ ಮಾತು ಕೇಳಿ ಚ್ಯವನನು, "ರಾಜಾ! ನನ್ನ ಮನಸ್ಸಿನಲ್ಲಿ ಸ್ವಲ್ಪವೂ ಕೋಪವಿಲ್ಲ. ನಿನ್ನ ಮಗಳು ನನ್ನ ಕಣ್ಣುಗಳನ್ನು ತಿವಿದ ಕಾರಣದಿಂದ ಶಾಪ ತಗಲಿದ ಹಾಗೆ ನಿನಗೆ ಸಂಕಟ ಉಂಟಾಗಿರಬಹುದು. ಅಷ್ಟೇಹೊರತು ನಾನು ಶಾಪ ಕೊಡಲಿಲ್ಲಪ್ಪಾ. ಯಾರಿಗೂ ಯಾವ ಬಗೆಯ ಹಾನಿಯನ್ನೂ



ಮಾನವನೆ ತಪಸ್ಸು ಮಾಡಿಕೊಂಡಿರುವವರಿಗೆ ಕೇಡು ಮಾಡಿದರೆ ಸುಮ್ಮನೆ ಬಿಡುತ್ತದೆಯೇ ? ಈಶ್ವರನಿಗೆ ಕೋಪ ಬಾರದಿರುವುದೇ ? ನಾನೋ ಮುದುಕ. ಈಗ ಕುರುಡನಾಗಿ ಹೋಗಿದ್ದೇನೆ. ಯಾರೂ ದಿಕ್ಕಿಲ್ಲದ ನನಗೆ, ಇನ್ನು ಯಾರು ಪರಿಚರ್ಯೆ ಮಾಡಿಯಾರು ?" ಎಂದು ಹೇಳಿ ದುಃಖಿಸಿದನು.

"ಮಹಾಮುನೀ ! ನಿನಗೆ ಎಷ್ಟು ಮಂದಿ ಸೇವಕರನ್ನಾದರೂ ನಾನು ಕಳುಹಿಸುತ್ತೇನೆ. ಅವರು ನಿನಗೆ ಎಲ್ಲಾ ವಿಧದ ಸೇವೆಗಳನ್ನೂ ಮಾಡುತ್ತಾರೆ. ಕೋಪಮಾತ್ರ ಇಟ್ಟುಕೊಳ್ಳಬೇಡ. ದಯೆದೋರು" ಎಂದನು ರಾಜ.

ಅದಕ್ಕೆ ಮುನಿ, "ನಾನೇನು ದಯ ಮಾಡೇನು ? ಕುರುಡನಾಗಿ ಹೋದವನು. ನನಗಿನ್ನು ನೇಮನಿಷ್ಠೆಗಳು ಹೇಗೆ ಸಾಗುತ್ತವೆ ? ಓ ರಾಜಾ ! ನನಗೆ ಸೇವೆ ಮಾಡಲು ನಿನ್ನ ಆ ಮಗಳನ್ನೇ ನನಗೆ ಕೊಟ್ಟು ಮದುವೆ ಮಾಡಿಬಿಡು. ನಾನು ಮುನಿಯಾಗಿರುವುದರಿಂದ ಏನೂ ಸಂಕೋಚ ಬೇಡ. ಇದರಿಂದ ತಪ್ಪು ಮಾಡಿದವರಿಗೆ ಪ್ರಾಯಶ್ಚಿತ್ತವಾದ ಹಾಗಾಗಿ ಎಲ್ಲಾ ಒಳ್ಳೆಯದಾಗುತ್ತದೆಂದು ನಂಬು. ನನಗೂ ಶಾಂತಿಯುಂಟಾಗಿ ಅದರ ಪ್ರತಿಫಲಿತ ನಿಮಗೂ ಉಂಟಾಗುತ್ತದೆ" ಎಂದನು.

ಈ ಮಾತು ಕೇಳಿ ರಾಜನು ವಿಚಾರಗ್ರಸ್ತನಾದನು. ಆಗಲೇ ಏನೂ ಉತ್ತರ ಕೊಡಲಾಗದೆ ಹೋದನು. ಮುದುಕನೂ, ಕುರುಡನೂ, ಮೊರಟನೂ ಆಗಿರುವ ಚ್ಯವನನು ಅತಿ ಕೋಮಲೆಯಾಗಿ ಬೆಳೆದ ತನ್ನ ಕುಮಾರಿ ಸುಕನ್ಯೆಗೆ ಏನು ಸಂತೋಷ ಪಡಿಸುವನು ? ಇಂತಹ ಗಂಡನೊಂದಿಗೆ ಸುಕನ್ಯೆಯಾದರೂ ಹೇಗೆ ಬಾಳುವೆ ನಡೆಸುವಳು, ಮಹಾರಾಜನ ಸುಪ್ಪತ್ತಿಗೆಯಲ್ಲಿ ಮಲಗುವ ತನ್ನ ಮಗಳು ? ಆಟವು ಎಂಥ ಪೇಚಾಟವಾಯಿತು!

ಈ ಬಗೆಯ ಆಲೋಚನೆಯಿಂದ ಚ್ಯವನನಿಗೆ ತನ್ನ ಮಗಳನ್ನು ಮದುವೆ ಮಾಡಿಕೊಡಲು ಇಷ್ಟವಿಲ್ಲದೆ ಶರ್ಯಾತಿ ಮನೆಗೆ ಹಿಂದಿರುಗಿ ತನ್ನ ಮಂತ್ರಿಗಳೊಂದಿಗೆ, "ನೋಡಿದಿರಾ ! ಪರಿಸ್ಥಿತಿ ಎಲ್ಲಿಯ ವರೆಗೆ ಬಂದಿತು ! ನಾನು ನನ್ನ ಕುಮಾರಿಯನ್ನು ಆ ಮುನಿಗೆ ಕೊಡಬೇಕು. ಇಲ್ಲದಿದ್ದರೆ ಮಲಮೂತ್ರ ಸ್ತಂಭನೆಯಿಂದ ನಾವು ಹೀಗೆಯೇ ಕಷ್ಟಪಡಬೇಕು !" ಎಂದನು.

ಅದಕ್ಕೆ ಮಂತ್ರಿಗಳು "ಮಹಾರಾಜಾ ! ಸುಕೋಮಲೆಯಾದ ಸುಕನ್ಯೆಯನ್ನು ಕಾಡಿನಲ್ಲಿ ವಾಸಮಾಡುವ ಮುನಿಗೆ ಕೊಡಲೇ ಬಾರದು. ನಾವು ಉದರ ಬಾಧೆಯಿಂದ ಸತ್ತರೂ ಚಿಂತೆಯಿಲ್ಲ" ಎಂದರು.

ಸುಕನ್ಯೆಯನ್ನು ತಕ್ಕ ವರನಿಗೆ ಕೊಟ್ಟು ರಾಜ್ಯವನ್ನೂ ಅವರಿಗೆ ಒಪ್ಪಿಸಿ ಎಲ್ಲರೂ ಉದರ ಬಾಧೆಯನ್ನು ಅನುಭವಿಸುವುದೆಂದು ಮಾತಾಡಿಕೊಳ್ಳುವಾಗ ಸುಕನ್ಯೆ ಅಲ್ಲಿಗೆ ಬಂದು, "ಅಪ್ಪಾ



ನನಗಾಗಿ ನೀವೆಲ್ಲಾ ಇಂಥ ವಿಪರೀತ ಆಲೋಚನೆಗೆ ಹೋಗಬಾರದು. ನಾನು ಮಾಡಿದ ತಪ್ಪಿನಿಂದಲೇ ಆ ಮುನಿಯ ಕಣ್ಣುಗಳು ಹೋದುವು. ನಾನು ಆತನನ್ನೇ ಮದುವೆಯಾಗುವೆನು. ಆತನ ದಯೆಯನ್ನು ಸಂಪಾದಿಸುವೆನು. ನೀವೆಲ್ಲ ಸುಖವಾಗಿರುವುದೇ ನನ್ನ ಸುಖ!" ಎಂದಳು.

ಅದನ್ನು ಕೇಳಿ ರಾಜನು, "ಅಯ್ಯೋ! ಆ ಕುರುಡ ಮುದುಕ ಚ್ಯವನನಿಗೆ ನೀನು ಪರಿಚರ್ಯೆ ಮಾಡಿಕೊಂಡಿರಲು ಸಾಧ್ಯವೆ? ನಮ್ಮ ಸುಖಕ್ಕಾಗಿ ನಿನ್ನನ್ನು ಅವನಿಗೆ ಬಲಿ ಕೊಡಲೇ? ನಿನ್ನ ಕೈಯಿಂದ ಅರಣ್ಯದಲ್ಲಿ ಮುದಿಗಂಡನಿಗೆ ಸೇವೆ ಮಾಡಲು ಬಿಟ್ಟರೆ ನನಗೆ ಒಳ್ಳೆಯ ಗತಿಯುಂಟಾದೀತೆ? ಅಮ್ಮಾ, ನಾನೂ ನನ್ನ ರಾಜ್ಯವೂ ಏನಾದರೂ ಆಗಲಿ, ನನ್ನ ಕೈಯಿಂದ ನಿನ್ನನ್ನು ಆ ಕಣ್ಣಿಲ್ಲದ ಮುದುಕನಿಗೆ ಕೊಡಲಾರೆ" ಎಂದನು. ಅದಕ್ಕೆ ಸುಕನ್ಯೆ, "ನಿಮ್ಮ ಮಾತು ಸವ್ಯವಾಗಿಲ್ಲ ಅಪ್ಪಾ. ಈ ಮುನಿಯನ್ನು ಸಾಮಾನ್ಯನೆನ್ನಬೇಡಿ, ಲೋಕೋತ್ತರನು! ಮುದುಕನಾದರೇನು? ಮಹಾ ತಪಸ್ವಿ. ಆತನ ಸೇವೆಯಿಂದ ನನಗೆ ಒಳಿತೇ ಆಗುತ್ತದೆ. ನನ್ನ ಮೂಲಕವಾಗಿ ನೀವೆಲ್ಲಾ ಚೆನ್ನಾಗಿರುವಿರಾದರೆ ಅದಕ್ಕಿಂತ ಹೆಚ್ಚಿನ ಸುಖ ನನಗೇನೂ ಬೇಡ" ಎಂದಳು.

ಅವಳ ದೃಢಸಂಕಲ್ಪವನ್ನು ನೋಡಿ ರಾಜನೂ ಮಂತ್ರಿಗಳೂ ಅತ್ಯಾಶ್ಚರ್ಯಪಟ್ಟರು. ತರುವಾಯ ಶರ್ಯಾತಿ ಸುಕನ್ಯೆಯನ್ನು ಕರೆದುಕೊಂಡು ಚ್ಯವನ ಮುನಿಯ ಬಳಿಗೆ ಹೋಗಿ ನಮಸ್ಕಾರಮಾಡಿ, "ನನ್ನ ಕುಮಾರಿ ಸುಕನ್ಯೆಯನ್ನು ನಿನಗೆ ಕೊಟ್ಟು ವಿವಾಹ ಮಾಡುತ್ತೇನೆ. ಅನುಗ್ರಹಿಸಿ ಅವಳನ್ನು ಗ್ರಹಿಸು" ಎಂದನು.

ಆಮೇಲೆ ಸುಕನ್ಯೆಯ ಮದುವೆ ಚ್ಯವನನೊಂದಿಗೆ ಶಾಸ್ತ್ರೋಕ್ತವಾಗಿ ನಡೆಯಿತು. ಆ ಕೂಡಲೇ ರಾಜನಿಗೂ ಸೈನಿಕರಿಗೂ ಬಂದಿದ್ದ ಉದರವ್ಯಾಧಿ ಕಡಮೆಯಾಯಿತು. ತಂದೆ ಹಿಂದಿರುಗಿ ಹೋಗುವಾಗ ಸುಕನ್ಯೆ ತನ್ನ ನಗಗಳನ್ನೂ, ಪಟ್ಟೆ ಸೀರೆಗಳನ್ನೂ ತಂದೆಗೆ ಕೊಟ್ಟು, ತನಗೆ ಚರ್ಮವನ್ನೂ ನಾರು ಸೀರೆಗಳನ್ನೂ ಪಡೆದುಕೊಂಡಳು.

ಹೀಗೆ ಮುನಿಪತ್ನಿಯಾದ ರಾಜಕುಮಾರಿ ಸುಕನ್ಯೆ ಹೊಸ ಜೀವಿತವನ್ನು ಪ್ರಾರಂಭಿಸಿದಳು. ಅವಳು ಕಾಡಿನೊಳಗೆ ತಿರುಗಾಡುವಳು; ಗಡ್ಡೆ ಗೆಣಸು ಫಲಗಳನ್ನು ತರುವಳು; ಅಗ್ನಿಗಾಗಿ ಒಣಗಿದ ಸಮಿಧೆಗಳನ್ನು ಆರಿಸಿಕೊಂಡು ಬರುವಳು; ಎಳ್ಳು ದರ್ಭೆಗಳನ್ನು ಸೇರಿಸಿಡುವಳು; ತೊಳೆದ ಕಮಂಡಲುವಿನಲ್ಲಿ ನೀರು ತುಂಬಿಸಿಡುವಳು; ಗಂಡನನ್ನು ಬಿಸಿನೀರಿನಲ್ಲಿ ಸ್ನಾನಮಾಡಿಸುವಳು; ಕೃಷ್ಣಾಜಿನವನ್ನು ಹರಡಿ ಗಂಡನ ನಿತ್ಯಕರ್ಮಗಳಿಗೆ ಅನುವುಮಾಡಿಡುವಳು; ನಿತ್ಯಕರ್ಮಗಳಾದ ಮೇಲೆ ಅವನ ಕೈಹಿಡಿದು ತಂದು ಕೂಡಿಸಿ, ಭೋಜನ



ಮಾಡಿಸುವಳು ; ಭೋಜನಾನಂತರ ಅವನ ಕೈಯನ್ನೂ, ಕಾಲುಗಳನ್ನೂ ತೊಳೆಯುವಳು ; ಆಮೇಲೆ ತಾನು ಊಟಮಾಡಿ, ಗಂಡನ ಕಾಲು ಒಸುಕುವಳು ; ಗಂಡನು ಎಲ್ಲಿಗಾದರೂ ಹೋಗುವಾಗ ಕೈಹಿಡಿದು ನಡೆಸಿಕೊಂಡು ಹೋಗುವಳು. ಹೀಗೆಲ್ಲಾ ಸುಕನ್ಯೆ ಗಂಡನನ್ನು ಭಕ್ತಿಯಿಂದ ಸೇವಿಸುತ್ತ ಕಾಲ ಕಳೆಯುತ್ತಿದ್ದಳು.

ಒಂದುದಿನ ಸುಕನ್ಯೆ ಕೆರೆಯಲ್ಲಿ ಸ್ನಾನಮಾಡಿ ಬರುತ್ತಿದ್ದಾಗ, ಜಂಟಿಗಳಾದ ಅಶ್ವಿನೀ ದೇವತೆಗಳು ಅವಳನ್ನು ನೋಡಿ, ಅವಳ ಸೌಂದರ್ಯಕ್ಕೆ ಆಶ್ಚರ್ಯ ಪಡುತ್ತ, ಅವಳ ಬಳಿಗೆ ಬಂದು, "ಸ್ವಲ್ಪ ನಿಲ್ಲಮ್ಮ. ನಾವು ಅಶ್ವಿನೀ ಕುಮಾರರು. ನೀನು ಎಲ್ಲಿಂದ ಬರುತ್ತಿರುವಿ ? ಎಲ್ಲಿಗೆ ಹೋಗುತ್ತಿರುವಿ? ನಿನ್ನ ಗಂಡ ಯಾರು ? ತಂದೆ ಯಾರು ? ನೀನು ರಾಜಕುಮಾರಿಯಾ ? ಅಲ್ಲ ಅಪ್ಸರೆಯಾ ? ನಾವು ಸುಮ್ಮನೆ ಹೊಗಳುವವರಲ್ಲ" ಎಂದರು.

ಅವರ ಮಾತು ಕೇಳಿ ಸುಕನ್ಯೆ ನಸುನಾಚಿ. ನಾನು ಶರ್ಯಾತಿ ರಾಜನ ಮಗಳು. ಗೌರವಶಾಲಿಯಾದ ಚ್ಯವನ ಮುನಿಯ ಪತ್ನಿ. ಆತನು ವೃದ್ಧನಾಗಿಯೂ ಕುರುಡನಾಗಿಯೂ ಇದ್ದಾನೆ. ಆತನಿಗೆ ಸೇವೆ ಮಾಡುತ್ತಾ ನಾನಿದ್ದೇನೆ. ನಾನು ಕೇಳಿಕೊಂಡ ಮೇರೆಗೇ ನನ್ನ ತಂದೆ ನನ್ನನ್ನು ಈ ಮಹಾಮುನಿಗೆ ಕೊಟ್ಟು ಮದುವೆ ಮಾಡಿದ್ದಾರೆ. ಅಲ್ಲಿ ಕಾಣುವುದೇ ನಮ್ಮ ಆಶ್ರಮ. ನೀವು ತುಂಬಾ ಒಳ್ಳೆಯವರಾಗಿದ್ದೀರಿ. ನಮ್ಮ ಆಶ್ರಮಕ್ಕೆ ದಯಮಾಡಿರಿ " ಎಂದಳು.

ಅವಳ ಮಾತು ಕೇಳಿ ಅಶ್ವಿನೀದೇವತೆಗಳು, "ಮುದುಕನೂ ಕುರುಡನೂ ಆದವನಿಗೆ ನಿನ್ನನ್ನು ನಿನ್ನ ತಂದೆ ಹೇಗೆ ಕೊಟ್ಟನು ? ನಿನ್ನಂಥಾ ದಿವ್ಯಸುಂದರಿ ದೇವಲೋಕದಲ್ಲಿಯೂ ಇಲ್ಲ. ಕುರುಡನಿಗೆ ಹೆಂಡತಿಯಾಗಿ ನೀನು ಹೇಗೆ ತಾನೇ ಜೀವನ ನಡೆಸುವಿಯೋ ? ನಿನಗೆ ತಕ್ಕವನಾಗಿರುವವನನ್ನು ನೋಡಿ ಮದುವೆಯಾಗಬಾರದೇ ? ತಪ್ಪಿಲ್ಲ. ಹಾಗೆ ಮಾಡಿ ಸುಖಜೀವನ ನಡೆಯಿಸುವವಳಾಗು " ಎಂದರು.

ಅದನ್ನು ಕೇಳಿ ಸುಕನ್ಯೆ, "ನೀವು ಸೂರ್ಯನ ಕುಮಾರರು. ನಿಮಗೆ ತಿಳಿಯದುದು ಏನೂ ಇಲ್ಲ. ಮದುವೆಯಾದ ನನ್ನನ್ನು ನೋಡಿ ನೀವು ಹೀಗೆಲ್ಲಾ ಮಾತಾಡಬಹುದೆ ? ನಾನು ಕುಲಕನ್ಯೆ. ನೀವು ಅಧಿಕಪ್ರಸಂಗವೇನಾದರೂ ಮಾಡಿದರೆ, ನಿಮ್ಮನ್ನು ಶಪಿಸುವ ಶಕ್ತಿ ನನಗಿದೆ" ಎಂದು ಕೋಪದಿಂದ ಮಾತಾಡಿದಳು.

ಅವಳ ಮಾತು ಕೇಳಿ ಅಶ್ವಿನೀ ದೇವತೆಗಳು ಭಯಪಟ್ಟರು. ಅವಳನ್ನು ಒಳಿತು ಮಾಡಿಕೊಳ್ಳುವ ಉದ್ದೇಶದಿಂದ, "ಅಮ್ಮಾ, ಶೀಲದ ವಿಷಯದಲ್ಲಿ ನೀನು ಲೀಲಾವತಿಗಿಂತಲೂ ಹೆಚ್ಚಿನವಳು. ನಿನಗೆ ಮೆಚ್ಚಿದ್ದೇವೆ. ವರ ಕೇಳಿಕೋ, ಸಂತೋಷದಿಂದ ಕೊಡುತ್ತೇವೆ" ಎಂದರು.



ಅವಳು ಸುಮ್ಮನಿರುವುದನ್ನು ನೋಡಿ, ಅವಳಿಗೆ ಬೇಕಾದ ವರಕ್ಕೆ ತಕ್ಕ ಅವಕಾಶವನ್ನು ಅವರೇ ಹೇಳಿದರು. ಅದೇನೆಂದರೆ, ಚ್ಯವನನನ್ನು ಅವರು ತಮ್ಮ ಹಾಗೆಯೇ, ತಮ್ಮಷ್ಟೇ ವಯಸ್ಸೂ ಅಂದವೂ ಇರುವಂತೆ ಮಾಡುತ್ತಾರೆ. ಹಾಗೆ ಒಂದೇ ರೂಪದಲ್ಲಿರುವ ಮೂವರೊಳಗೆ ಸುಕನ್ಯೆ ಒಬ್ಬನನ್ನು ಗಂಡನೆಂದು ಆರಿಸಿಕೊಳ್ಳಬೇಕು !

ಸುಕನ್ಯೆ ಆಶ್ರಮಕ್ಕೆ ಹೋಗಿ ಚ್ಯವನನೊಂದಿಗೆ ಅಶ್ವಿನೀ ದೇವತೆಗಳು ಹೇಳಿದ ಮಾತುಗಳನ್ನು ಹೇಳಿ, ಏನು ಮಾಡಬೇಕೆಂದು ಕೇಳಿದಳು. ಅವರು ಹೇಳಿದಂತೆಯೇ ಮಾಡಲು ಚ್ಯವನನು ಒಪ್ಪಿಗೆ ಕೊಟ್ಟನು. ಸುಕನ್ಯೆ ಅವರನ್ನು ತನ್ನ ಆಶ್ರಮಕ್ಕೆ ಕರೆ ತಂದಳು.

ಅವರು ಹೇಳಿದ ಹಾಗೆ ಚ್ಯವನನು ಯುವಕನಾಗಬೇಕಾದರೆ ನೀರಿನಲ್ಲಿ ಮುಳುಗಬೇಕಾಗಿತ್ತು. ಚ್ಯವನನು ಆ ಮಾತಿಗೆ ಒಪ್ಪಿದನು. ಚ್ಯವನನು ಅಶ್ವಿನೀ ದೇವತೆಗಳೊಂದಿಗೆ ಕೆರೆಗಿಳಿದು ಅವರೊಂದಿಗೇ ಮುಳುಗಿದನು. ಆಮೇಲೆ ಮೂವರೂ ಒಂದೇ ರೂಪದಲ್ಲಿ ಕೆರೆಯಿಂದ ಮೇಲೆ ಬಂದರು. ಅವರಲ್ಲಿ ಸುಕನ್ಯೆ ತನ್ನ ಗಂಡನನ್ನು ಆರಿಸಿಕೊಳ್ಳಬೇಕಾಗಿತ್ತು.

ಸುಕನ್ಯೆ ಜಗದಂಬೆಯನ್ನು ಶರಣು ಹೋಗಿ ಧ್ಯಾನಮಾಡಿದಳು. ಅಂಬಾದೇವಿಯ ಅನುಗ್ರಹದಿಂದ ಅವಳಿಗೆ ದಿವ್ಯಜ್ಞಾನ ಉಂಟಾಯಿತು. ಕೆರೆಯಿಂದ ಮೇಲೆ ಬಂದು ನಿಂತ ಆ ಮೂವರಲ್ಲಿ ತನ್ನ ಗಂಡನು ಯಾರೆಂದು ಅವಳಿಗೆ ಗೊತ್ತಾಯಿತು. ಅವಳು ತನ್ನ ಗಂಡನನ್ನು ಸರಿಯಾಗಿ ತಿಳಿದು ಅವನ ಕೈ ಹಿಡಿದುದನ್ನು ನೋಡಿ ಅಶ್ವಿನೀ ದೇವತೆಗಳು ಅವಳ ಶೀಲವನ್ನು ತುಂಬಾ ಮೆಚ್ಚಿದರು.

ಚ್ಯವನನೂ ಸಹ ಅಶ್ವಿನೀ ದೇವತೆಗಳನ್ನು ಪ್ರಶಂಸಿಸುತ್ತ, "ನಿಮ್ಮ ಪುಣ್ಯದಿಂದ ನನಗೆ ಯೌವನವೂ, ಕಣ್ಣುಗಳೂ ಬಂದಿವೆ. ನಾನೀಗ ಸುಂದರನೂ ಸುಕುಮಾರನೂ ಆಗಿರುವೆನು. ಉಪಕಾರಕ್ಕೆ ಪ್ರತ್ಯುಪಕಾರ ಮಾಡಬೇಕೆಂದಿದ್ದೇನೆ. ನನ್ನಿಂದ ನೀವು ಏನನ್ನು ಬಯಸುವಿರೋ ಹೇಳಬೇಕು" ಎಂದನು.

ಅಶ್ವಿನೀ ದೇವತೆಗಳು ಹೀಗೆಂದರು : "ನಾವು ವೈದ್ಯಕೀಯ ಮಾಡುವ ದೇವತೆಗಳೆಂಬ ನೆವನದಲ್ಲಿ ಇಂದ್ರನು ನಮಗೆ ಯಜ್ಞದಲ್ಲಿ ಸೋಮಪಾನ ಮಾಡುವ ಹಕ್ಕನ್ನು ಅಲ್ಲಗಳೆದಿದ್ದಾನೆ. ನಿನಗೆ ಸಾಧ್ಯವಾದರೆ ಆ ಹಕ್ಕು ನಮಗೆ ಬರುವಂತೆ ಮಾಡು" ಎಂದರು.

"ಆಗಲಿ. ಶರ್ಯಾತಿಯಿಂದ ಯಜ್ಞ ಮಾಡಿಸಿ, ನಿಮಗೆ ಸೋಮರಸ ಕೊಡಿಸುತ್ತೇನೆ" ಎಂದು ಚ್ಯವನನು ಅಶ್ವಿನೀ ದೇವತೆಗಳಿಗೆ ಮಾತುಕೊಟ್ಟನು. ಅಶ್ವಿನೀ ದೇವತೆಗಳು ತೃಪ್ತರಾಗಿ ಹೊರಟು ಹೋದರು. ಯೌವನ ಪಡೆದ ಚ್ಯವನನು ಸುಕನ್ಯೆಯೊಂದಿಗೆ ಆಶ್ರಮಕ್ಕೆ ಹಿಂದಿರುಗಿದನು.

ಹೀಗಿರುವಾಗ ಒಂದುದಿನ ಶರ್ಯಾತಿಯ ಪತ್ನಿಯರಲ್ಲಿ ಸುಕನ್ಯೆಯ ತಾಯಿಗೆ ತನ್ನ ಮಗಳು ಕುರುಡು ಮುದುಕ ಗಂಡನೊಂದಿಗೆ ಹೇಗಿರುವಳೋ, ಎಷ್ಟು ಸೊರಗಿದಳೋ ಎಂದು ಆಂದೋಳನೆ ಯುಂಟಾಯಿತು. ಶರ್ಯಾತಿಗೆ ಕೂಡಾ ತನ್ನ ಮಗಳನ್ನು ನೋಡಬೇಕೆನಿಸಿತು. ಅವನು ಪತ್ನಿ ಯನ್ನು ಕರೆದುಕೊಂಡು ರಥದ ಮೇಲೆ ಚ್ಯವನಾಶ್ರ ಮಕ್ಕೆ ಬಂದನು. ಅಲ್ಲಿ ಸುಂದರನಾದ ಪುರುಷ ನೊಂದಿಗೆ ಸುಕನ್ಯೆ ಇರುವುದನ್ನು ನೋಡಿ ಅವರಿಗೆ ಜುಪ್ಸೆನಿಸಿತು. ತಮ್ಮ ಮಗಳು ಮುದುಕ ಗಂಡನನ್ನು ಕೊಂದು, ಮತ್ತಾವನನ್ನೋ ವರಿಸಿಕೊಂಡಿದ್ದಾಳೆಂದು ವಿಪರೀತವಾಗಿ ತಿಳಿದು ಕೋಪಾವೇಶಗೊಂಡು ಬಾಯ್ದೆಗೆದರು.

ಅಷ್ಟರಲ್ಲಿ ಸುಕನ್ಯೆ ತನ್ನ ತಂದೆ ತಾಯಂದಿರ ಕೋಪತಾಪಗಳನ್ನು ಹೋಗಲಾಡಿಸಿ, ನಡೆದ ಸಂಗತಿಯನ್ನೆಲ್ಲಾ ವಿವರಿಸಿ ಹೇಳಿದಳು. ಚ್ಯವನನು ಕೂಡಾ ಅದನ್ನೇ ಹೇಳಿ, ತಾನು ಅಶ್ವಿನೀ ದೇವತೆ ಗಳಿಗೆ ಕೊಟ್ಟ ಮಾತನ್ನು ಕುರಿತೂ ಹೇಳಿದನು. ತನ್ನ ಅಳಿಯನ ಮಾತನ್ನು ನಡೆಯಿಸಲು ಶರ್ಯಾತಿ ಯಜ್ಞ ಕಾರ್ಯಕ್ಕೆ ತಲೆ ಹಾಕಿದನು. ಯಜ್ಞ ನಡೆಯುವ ಸ್ಥಳಕ್ಕೆ ದೇವತೆಗಳೊಂದಿಗೆ ಇಂದ್ರನೂ, ಅಶ್ವಿನೀ ದೇವತೆಗಳೂ ಸಹಾ ಬಂದರು.

ಯಜ್ಞದ ಸಂದರ್ಭದಲ್ಲಿ ಚ್ಯವನನು ಅಶ್ವಿನೀ ದೇವತೆಗಳಿಗೆ ಸೋಮರಸವನ್ನು ನೀಡಿದನು. ಆಗ ಇಂದ್ರನು ತಡೆದು "ಇವರು ವೈದ್ಯಕೀಯ ಮಾಡುವವರು. ಸೋಮಪಾನಕ್ಕೆ ಅರ್ಹರಲ್ಲ!" ಎಂದನು.

"ಇವರಿಗೆ ಸೋಮವನ್ನು ಕೊಡಲಿಕ್ಕಾಗಿಯೇ ಈ ರಾಜನಿಂದ ಯಜ್ಞವನ್ನು ಮಾಡಿಸಿದ್ದೇನೆ. ಇವರನ್ನು ತಡೆಯುವ ಹಕ್ಕು ನಿನಗಿಲ್ಲ" ಎಂದು ಹೇಳಿ ಚ್ಯವನನು ಅಶ್ವಿನೀ ದೇವತೆಗಳಿಗೆ ಸೋಮರಸವನ್ನು ಕೊಟ್ಟನು.

ಇಂದ್ರನು ಕೋಪದಿಂದ ಚ್ಯವನನನ್ನು ಕೊಲ್ಲಲು ವಜ್ರಾಯುಧವನ್ನು ಪ್ರಯೋಗಿಸಿದನು. ಚ್ಯವನನು ತನ್ನ ತಪಃಶಕ್ತಿಯಿಂದ ಇಂದ್ರನ ಕೈಯನ್ನು ಸ್ತಂಭನಗೊಳಿಸಿ, ಹೋಮಕುಂಡದಿಂದ ಭಯಂಕ ರಾಕೃತಿಯ ಕೃತ್ಯಭೂತವನ್ನು ಸೃಷ್ಟಿಸಿದನು. ಆ ಭೂತವು ಇಂದ್ರನನ್ನು ನುಂಗಲು ಬರಲು, ದೇವತೆಗಳೂ ಇಂದ್ರನೂ ನಡುಗಿದರು.

"ಇಂದ್ರಾ! ಚ್ಯವನನಿಗೇ ಶರಣಾಗು! ಕೃತ್ಯ ಭೂತವನ್ನು ಅವನೇ ನಿಗ್ರಹಿಸುವನು" ಎಂದನು ಬೃಹಸ್ಪತಿ. ಇಂದ್ರನು ಹಾಗೆಯೇ ಚ್ಯವನನಿಗೆ ಶರಣಾಗಿ ಅಪಾಯದಿಂದ ಪಾರಾದನು. ಯಜ್ಞವು ಸಾಂಗವಾಗಿ ನಡೆಯಿತು.





# ನಾಲ್ವರು ಹೆಡ್ಡರು

ಒಂದಾನೊಂದು ಗ್ರಾಮದಲ್ಲಿ ದೊಡ್ಡ ಧನಿಕನಾದ ಆಸಾಮಿಯೊಬ್ಬನಿದ್ದ. ಅವನಿಗೆ ನಾಲ್ವರು ಪುತ್ರ ಶಿಖಾಮಣಿಗಳಿದ್ದರು. ಅವರು ಧಷ್ಟಪುಷ್ಟರಾಗಿ ಚೆನ್ನಾಗಿದ್ದರೂ ಯಾವ ಕೆಲಸಕ್ಕೂ ಉಪಯೋಗವಿಲ್ಲದ ಮೂರ್ಖರು. ಚೆನ್ನಾಗಿ ಬೆಳೆದು ಮಕ್ಕಳ ತಂದೆಗಳಾಗುವ ವಯಸ್ಸು ಬಂದರೂ ಸಹ, ಅವರು ತಾಯಿಯ ಸೆರಗಿನ ಮರೆಯ ಮಕ್ಕಳ ಹಾಗೆ, ತಂದೆಯನ್ನೇ ಎಲ್ಲದಕ್ಕೂ ನಂಬಿಕೊಂಡವರ ಹಾಗೆ ದಿನ ಕಳೆಯುತ್ತಿದ್ದರು.

ತಾನು ವೃದ್ಧನಾಗುತ್ತಾ ಬರುವುದನ್ನು ನೋಡಿದಾಗಲಷ್ಟೇ ಅವರ ತಂದೆ ತನ್ನ ಮಗಂದಿರನ್ನು ಕುರಿತು ಮುಂದಾಲೋಚನೆಗೆ ತೊಡಗಿದನು. ಅವರ ಮೇಲೆ ಏನಾದರೂ ಬಾಧ್ಯತೆಯನ್ನು ಹೊರಿಸಿ ಸ್ವತಂತ್ರವಾಗಿ ಜೀವಿಸಲು ಕಲಿಸಬೇಕೆಂದು ನಿಶ್ಚಯಿಸಿಕೊಂಡನು. ಒಂದು ದಿನ ತಂದೆ ದೊಡ್ಡವನನ್ನು ಕರೆದು, "ನೀನು ನಿನ್ನ ಸೋದರ ಮಾವನ ಮನೆಗೆ ಹೋಗಿ ಅಲ್ಲಿರುವ ಮೂವರು ಮಾವಂದಿರ ಕ್ಷೇಮ ಸಮಾಚಾರ ತಿಳಿದುಕೊಂಡು ಬಾ" ಎಂದನು. ಅದರಂತೆ ದೊಡ್ಡವನು ಮರುದಿನ ಬೆಳಂಜಾಮದಲ್ಲಿ ಹೊರಡಲು ಸಿದ್ಧನಾದನು. ಆಗ ಅವನ ತಾಯಿ, "ಅಪ್ಪಾ, ಆ ಊರು ಮೊದಲೇ ಬೆಂಕಿ ನೀರಿಲ್ಲದ ಊರು. ನೀನು ಅಲ್ಲಿ ಹೆಚ್ಚು ದಿನ ಇರದೆ ಆದಷ್ಟು ಬೇಗ ಹಿಂದಿರುಗಿ ಬಂದುಬಿಡು. ಮಾವಂದಿರು ನಾಲ್ಕು ದಿನ ಕುಳಿತು ಹೋಗಬಹುದೆಂದರೆ, ಅವಸರ ಕೆಲಸವಿದೆಯೆಂದು ಹೇಳು" ಎಂದಳು.

ದೊಡ್ಡವನು ಯಾರಿಗೂ ಗೊತ್ತಾಗದಂತೆ, ಎರಡು ಮಡಕೆಗಳನ್ನು ಎತ್ತಿಕೊಂಡು, ಒಂದರಲ್ಲಿ ಸ್ವಲ್ಪ ಬೆಂಕಿಯನ್ನೂ ಇನ್ನೊಂದರಲ್ಲಿ ನೀರನ್ನೂ ಹಾಕಿಕೊಂಡು ಸೋದರ ಮಾವನ ಊರಿಗೆ ಹೊರಟನು. ಸ್ವಲ್ಪದೂರ ಹೋದ ಮೇಲೆ ಎರಡು ಮಡಕೆಗಳನ್ನು ಒಯ್ಯುವುದು ಅವನಿಗೆ ಅಸೌಕರ್ಯವೆನಿಸಿತು. ಬೆಂಕಿಯ ಮಡಕೆಗೇ ನೀರನ್ನೂ ಹಾಕಿ, ಖಾಲೀ ಮಡಕೆಯನ್ನು ಆಚೆಗೆ ಬಿಸುಟು ಪ್ರಯಾಣ ಮುಂದುವರಿಸಿದನು.

ಈಗ ಅವನ ನಡಿಗೆ ಚುರುಕಾದುದರಿಂದ ಬೇಗದಲ್ಲೇ ಮಾವಯ್ಯನ ಊರನ್ನು ತಲಪಿದನು. ಮಾವಂದಿರೆಲ್ಲ ಒಂದೇ ಕಡೆಯಲ್ಲಿದ್ದರು. ಆಕಸ್ಮಾತ್ತಾಗಿ ಅವನನ್ನು ನೋಡಿದ ಕೂಡಲೇ ಮೂವರ

**೨೫ ವರ್ಷಗಳ ಹಿಂದಿನ ಚಂದಮಾಮ ಕಥೆ**

ಮಾವಂದಿರೂ "ಓ! ಅಪರೂಪದ ಅಳಿಯ! ಆ ಮಡಕೆ ಏನದು?" ಎಂದು ಕೇಳಿದರು.

"ಈ ಊರಿನಲ್ಲಿ ಬೆಂಕೀ ನೀರೂ ಬಹಳ ಕಷ್ಟ ವಂತಲ್ಲಾ? ಅದಕ್ಕೇ ತಂದಿದ್ದೇನೆ" ಎಂದನು ದೊಡ್ಡವನು.

"ಆಹಾ! ನಿನ್ನ ಬುದ್ಧಿಗೆ ಮೆಚ್ಚಲೇಬೇಕು. ಬೆಂಕಿ ಎಲ್ಲಿದೆ?" ಎಂದು ಅವರು ಕೇಳಿದರು.

"ನೀರಿನಲ್ಲೇ ಇದೆ!" ಎಂದ ದೊಡ್ಡವನು. ಅವನ ಮುಗ್ಧ ತನಕ್ಕಾಗಿ ಸೋದರ ಮಾವಂದಿರು ತುಂಬಾ ನಕ್ಕು ಸಂತೋಷಪಟ್ಟರು. ಆ ಮೇಲೆ ಅವನನ್ನು ಹಿಂದಿರುಗಿ ಕಳುಹಿಸುವಾಗ, "ನೋಡಪ್ಪಾ, ಅಳಿಯರಾಯಾ! ಪ್ರಪಂಚವು ಮಹಾ ಪಾಪಿಷ್ಠವಾದ್ದು. ನೀನು ಯಾವಾಗಲೂ ಸಹಾಯಕರಿಲ್ಲದೆ ಒಬ್ಬನೇ ಮನೆ ಬಿಟ್ಟು ಕದಲಬಾರದು" ಎಂದು ಸಲಹೆ ಮಾಡಿದರು.

ಅವನು ಮನಗೆ ಹಿಂದಿರುಗಿ ಬಂದು, ನಡೆದುದನ್ನೆಲ್ಲಾ ತಂದೆಗೆ ಹೇಳಿದನು. ತಂದೆ ಆ ಮಗನ ಮೇಲೆ ಆಶೆಯನ್ನು ಬಿಟ್ಟು ಎರಡನೇ ಮಗನನ್ನು ಹತ್ತಿರ ಕರೆದು, "ನೋಡಪ್ಪಾ, ನಿನಗೊಂದು ಕೆಲಸ ಹೇಳುತ್ತೇನೆ. ನೀನು ಹೋಗಿ ನಮ್ಮ ಪಾಳ್ಯದ ಮನೆಯಲ್ಲೇ ತಂಗಿಕೊಂಡಿದ್ದು, ಈ ವರ್ಷದಿಂದ ನೀನೇ ಸ್ವಂತವಾಗಿ ಆಳುಗಳು ಕೆಲಸಮಾಡುವಾಗ ಹತ್ತಿರವೇ ಇದ್ದು ವ್ಯವಸಾಯ ನೋಡಿಕೋ" ಎಂದು ಹೇಳಿದನು.

"ಸರಿ, ಅಪ್ಪಾ" ಎಂದು, ಎರಡನೆಯವನು ಪಾಳ್ಯದ ಮನೆಗೆ ಹೋಗಿ ತಂಗಿದ್ದು ವ್ಯವಸಾಯದ ಕೆಲಸಗಳನ್ನು ಗಮನಿಸ ತೊಡಗಿದನು. ಅಲ್ಲಿ ಹೊಲಗಳಲ್ಲಿ ಎಳ್ಳಿನ ಬೆಳೆಯ ಬಿತ್ತನೆಯ ಕಾಲವಾಗಿತ್ತು. ಅದಕ್ಕಾಗಿ ಆಳುಗಳು ಎಳ್ಳಿನ ಚೀಲಗಳನ್ನು ಬಿಚ್ಚಿ ತಯಾರಾಗಿಟ್ಟಿದ್ದರು.

ಧನಿಕನ ಎರಡನೇ ಮಗನು ಆಳುಗಳ ಕೆಲಸದ ಮೇಲ್ವಿಚಾರಕನಂತೆ ಅಲ್ಲಿಗೆ ಬಂದು, ಒಂದು ಮುಷ್ಟಿ ಎಳ್ಳು ತೆಗೆದು ತಿನ್ನಲು ತೊಡಗಿದನು. ಇದನ್ನು ನೋಡಿ ಒಬ್ಬ ರೈತ ಅವನೊಂದಿಗೆ, "ಹಸಿಯದು



ಏಕೆ ತಿನ್ನುವಿರಿ ಅಯ್ಯಾ? ಬೇಕಾದರೆ ಹುರಿದು ಕೊಡುತ್ತೇನೆ. ಚೆನ್ನಾಗಿರುತ್ತೆ" ಎಂದು ತನ್ನ ಹೆಂಡತಿಯನ್ನು ಕರೆದು ಒಂದು ಸೇರು ಎಳ್ಳನ್ನು ಹುರಿಯಿಸಿ ಯಜಮಾನನ ಮಗನಿಗೆ ಕೊಡಿಸಿದನು. ಅವನು ಅದನ್ನು ತಿನ್ನುತ್ತ, ಆ ರುಚಿಗೆ ಆಶ್ಚರ್ಯಪಡುತ್ತ, "ಎಲೋ, ಬಾ ಇಲ್ಲಿ. ಮೊದಲು ಈ ಗೋಣೀ ಚೀಲದಲ್ಲಿದ್ದ ಎಳ್ಳನ್ನೆಲ್ಲಾ ಹುರಿಸಿಬಿಡು" ಎಂದು ಅಪ್ಪಣೆ ಮಾಡಿದನು.

"ಮತ್ತೆ ಬೀಜಕ್ಕೆ ಹೇಗೆ?" ಎಂದು ರೈತರು ಆಶ್ಚರ್ಯದಿಂದ ಕೇಳಿದರು.

"ನಾನು ಹೇಳುತ್ತೇನೆ, ಮೊದಲು ಹುರಿಸು" ಎಂದು ಎರಡನೇ ಮಗನು ತನಗೆಲ್ಲಾ ಗೊತ್ತಿದೆ ಎಂಬಂತೆ ಹೇಳಿದನು.

ಅವನ ಇಷ್ಟದಂತೆಯೇ ಮಾಡದೆ ಬೇರೆ ಉಪಾಯವಿಲ್ಲದ್ದರಿಂದ್ದ ರೈತರು ದೊಡ್ಡ ಒಲೆ ಹಾಕಿಸಿ ಕೊಪ್ಪರಿಗೆಯಲ್ಲಿ ಅಷ್ಟೂ ಎಳ್ಳನ್ನು ಹುರಿದರು. "ಸರಿ. ಇನ್ನು ಇದನ್ನು ತೆಗೆದುಕೊಂಡು ಹೋಗಿ ಹೊಲದಲ್ಲಿ ಚೆಲ್ಲಿರಿ ನೋಡುವಾ. ಘಮಘಮಿಸುವ ಎಳ್ಳಿನ ಬೆಳೆ ಬರುತ್ತೆ ನೋಡುತ್ತಿರಿ, ಇಷ್ಟು ಕಾಲ ವ್ಯವಸಾಯ ಮಾಡುವಿರಿ, ಹಸಿ ಎಳ್ಳು ಚೆಲ್ಲಿ ಹಸಿ ಎಳ್ಳನ್ನೇ ಪಡೆಯುವ ನಿಮಗೆ ಇಷ್ಟೂ ಗೊತ್ತಾಗಬೇಡವೆ?" ಎಂದನು ಧನಿಕನ ಎರಡನೇ ಮಗ.

ರೈತರು ಧನಿಕನ ಬಳಿಗೆ ಓಡಿ ಹೋಗಿ ನಡೆದ ಸಮಾಚಾರವನ್ನೆಲ್ಲಾ ಹೇಳಿದರು. ಧನಿಕನು ತಲೆ ಚಚ್ಚಿಕೊಂಡು ತನ್ನ ಎರಡನೇ ಮಗನನ್ನು ಹಿಂದಕ್ಕೆ ಕರೆಯಿಸಿ "ಸಾಕು ನಿನ್ನ ವ್ಯವಸಾಯ!" ಎಂದನು.

ಆ ಧನಿಕನಿಗೆ ಅವನಿರುವ ಊರಿನಲ್ಲಿಯೇ ಒಂದು ಪಶುಗಳ ಶಾಲೆ ಇದ್ದಿತು. ಅದರ ಬಾಧ್ಯತೆ ವಹಿಸಿಕೊಂಡಿರುವಂತೆ ಧನಿಕನು ಮೂರನೇ ಮಗನಿಗೆ ಹೇಳಿದನು.

ಮೂರನೇ ಮಗನು ಅಲ್ಲಿಗೆ ಹೋಗಿ ಕೆಲವುದಿನ ಗಳಿದ್ದ ಮೇಲೆ, ಅವನಿಗೆ ಒಂದು ದೊಡ್ಡ ಆಲೋಚನೆ ಬಂತು. ಕೂಡಲೇ ಅವನು ಗೊಲ್ಲರನ್ನೆಲ್ಲಾ ತನ್ನ ಬಳಿಗೆ ಕರೆದು, ಈ ವಿಧವಾಗಿ ಹೇಳಿದನು: "ನನ್ನ





ಪಶುಗಳೆಲ್ಲಾ ಒಂದು ಬೊಟ್ಟು ಹಾಲೂ ಹಿಂಡದೆ ಬತ್ತಿ ಹೋದುವು. ಗೊಲ್ಲರು ನಡೆದ ಸಮಾಚಾರ ವನ್ನೆಲ್ಲಾ ಧನಿಕನೊಂದಿಗೆ ಬಿನ್ನವಿಸಿಕೊಂಡರು. ಅವನು ತನ್ನ ಹಣೇ ಬರೆಹಕ್ಕೆ ನೊಂದುಕೊಂಡು ಮೂರನೇ ಮಗನನ್ನು ಮನೆಗೆ ಕರೆಯಿಸಿಕೊಂಡನು.

ಈಗ ಧನಿಕನ ಆಶೆಗಳೆಲ್ಲಾ ತನ್ನ ನಾಲ್ಕನೆಯ ಮಗನ ಮೇಲೆಯೇ ನಿಂತಿತ್ತು. ನಿಜಕ್ಕೂ ಅವನು ಮೂವರು ಅಣ್ಣಂದಿರಿಗಿಂತಲೂ ಬುದ್ಧಿವಂತ ನಂತೆಯೇ ಕಾಣುತ್ತಿದ್ದನು.

ಈ ಮೊದಲಿನವರಿಗೆ ಹೇಳಿದಂತೆ ತಂದೆ ನಾಲ್ಕನೇ ಯವನೊಂದಿಗೆ, ಇಂತಹ ಕೆಲಸ ಮಾಡೆಂದೇನೂ ಹೇಳದೆ, "ನೀನು ಏನು ಕೆಲಸ ಮಾಡಬೇಕೆಂದಿರುವೆ ಯಪ್ಪಾ ?" ಎಂದು ಅವನನ್ನೇ ಕೇಳಿದನು.

"ನನಗೆ ವ್ಯಾಪಾರ ಮಾಡಬೇಕೆಂದಿದೆ ಅಪ್ಪಾ" ಎಂದನು ನಾಲ್ಕನೇ ಮಗ.

"ಸರಿ. ಹಾಗಾದರೆ ಎರಡು ಸಾವಿರ ರೂಪಾಯಿ ತೆಗೆದುಕೊಂಡು ವ್ಯಾಪಾರಮಾಡಿ ಹಣ ಸಂಪಾದಿಸಿ ಕೊಂಡು ಬಾ." ಎಂದು ತಂದೆ ಅವನಿಗೆ ಎರಡು ಸಾವಿರ ರೂಪಾಯಿ ಕೊಟ್ಟನು.

ನಾಲ್ಕನೆಯವನು ಎರಡು ಸಾವಿರ ರೂಪಾಯಿ ಗಳೊಂದಿಗೆ ನಗರಕ್ಕೆ ಹೋದನು. ಅಲ್ಲಿ ಬಗೆ ಬಗೆಯ ಸರಕುಗಳನ್ನು ಚೌಕಾಸಿ ಮಾಡಿ ಮಾಡಿ, ಗಂಧದ ಕಟ್ಟಿಗೆ ಬಹು ಶ್ರೇಷ್ಠ ಎಂಬ ಮಾತು ಕೇಳಿ, ಅದನ್ನೇ ಕೊಂಡು ಕೊಂಡು ಗಾಡಿಯಲ್ಲಿ ಹಾಕಿಕೊಂಡು ಹೊರಟನು.

ಆ ಗಾಡಿಯಲ್ಲಿ ಅವನು ಅನೇಕ ಊರುಗಳನ್ನು ತಿರುಗಿದರೂ ಗಂಧದ ತುಂಡುಗಳಿಗೆ ಗಿರಾಕಿ ಸಿಗಲೇ ಇಲ್ಲ. ಕಡೆಗೆ ಒಂದು ಊರಿನಲ್ಲಿ ಕೆಲವರ ಹತ್ತಿರ, "ಈ ಊರಿನಲ್ಲಿ ಚೆನ್ನಾಗಿ ಮಾರಾಟ ವಾಗುವ ವಸ್ತುಯಾವುದು ?" ಎಂದು ಕೇಳಿದನು. "ಅದೇನು ಕೇಳುವೆ ? ಈದಿನ ಇಟ್ಟಿಲಿಗಿರುವ

ಮಾತು ಲಕ್ಷ್ಯವಿಟ್ಟು ಕೇಳಿರಿ. ಇನ್ನು ಒಂದು ತಿಂಗಳಲ್ಲಿ ಸಂಕ್ರಾಂತಿ ಹಬ್ಬ ಬರುತ್ತದಷ್ಟೆ ? ನೀವು ಈ ಒಂದು ತಿಂಗಳವರೆಗೆ ಯಾವ ಪಶುಗಳ ಹಾಲನ್ನೂ ಹಿಂಡಬೇಡಿರಿ. ಸಂಕ್ರಾಂತಿಯ ದಿನ ಒಂದು ತಿಂಗಳಿನ ಎಲ್ಲಾ ಹಾಲನ್ನೂ ಹಿಂಡಿಕೊಂಡರೆ, ಹೆಚ್ಚು ಬೆಲೆಗೆ ಮಾರಿಬಿಡಬಹುದು."

ಈ ಮಾತು ಕೇಳಿ ಕೆಲಮಂದಿ ನೌಕರರು ನಕ್ಕರು. ಮತ್ತೆ ಕೆಲವರು "ಅದೇನೂ ನಡೆಯುವ ಮಾತು ಅಲ್ಲ ದೊರೆಗಳೇ !" ಎಂದು ಮರ್ಯಾದೆಯಿಂದ ಹೇಳಿ ನೋಡಿದರು.

ಅದನ್ನು ಕೇಳಿ ಧನಿಕನ ಮೂರನೆ ಮಗ ಕೋಪ ದಿಂದು ಹುಬ್ಬು ಸುರುಗಿಸಿ, "ನಾನು ಹೇಳಿದಂತೆ ಮಾಡಬೇಕು. ಯಜಮಾನ ನಾನೋ ನೀವೋ ! ಅಧಿಕ ಪ್ರಸಂಗದವರು !" ಎಂದು ಜರೆದಾಡಿದನು. ನಮಗೇಕೆಂದು ಗೊಲ್ಲರು ಪಶುಗಳ ಹಾಲು ಹಿಂಡುವುದನ್ನು ನಿಲ್ಲಿಸಿದರು. ಸಂಕ್ರಾತಿಯ ಸಮಯಕ್ಕೆ

ಗಿರಾಕಿ ಮತ್ತಾವುದಕ್ಕೂ ಇಲ್ಲ!" ಎಂದು ಖಂಡಿತವಾದ ಉತ್ತರ ಸಿಕ್ಕಿತು.

"ಭೇಷ್!" ಎಂದುಕೊಂಡು ಧನಿಕನ ನಾಲ್ಕನೇ ಮಗ ಒಂದು ಗಾಡೀ ಗಂಧದ ಕಟ್ಟಿಗೆ ತುಂಡುಗಳನ್ನೆಲ್ಲಾ ಉರಿಸಿ ಇದ್ದಿಲಿಯಾಗಿ ಮಾಡಿ, ಆ ಕೂಡಲೇ ಎಲ್ಲವನ್ನೂ ಹತ್ತು ರೂಪಾಯಿಗೆ ಮಾರಿಬಿಟ್ಟನು. ಅಲ್ಲಿಂದ ಅವನು ಗಾಡಿಯಲ್ಲಿ ಕುಳಿತು ಮತ್ತೊಂದು ಊರಿಗೆ ಹೋಗಿ ಅಲ್ಲಿನವರೊಡನೆ, "ಈ ಊರಿನಲ್ಲಿ ಎಲ್ಲದಕ್ಕಿಂತ ಹೆಚ್ಚು ಅಗ್ಗದಲ್ಲಿ ಸಿಗುವ ವಸ್ತು ಯಾವುದು?" ಎಂದು ಕೇಳಿದನು.

"ಇನ್ನೇನಿದೆ? ಹತ್ತಿ! ಯಾವ ಮನೆಯಲ್ಲಿ ಕೇಳಿದರೂ ಸಿಗುತ್ತದೆ." ಎಂದರು ಆ ಊರಿನವರು.

ಸಂತೋಷದಿಂದ ನಾಲ್ಕನೆಯವನು ಹತ್ತು ರೂಪಾಯಿಗೆ ಹತ್ತಿಯನ್ನು ಕೊಂಡುಕೊಂಡು ಗಾಡಿಯಲ್ಲಿ ಹಾಕಿಕೊಂಡು ನಗರಕ್ಕೆ ಹೋಗಿ ಅಲ್ಲಿ ಹತ್ತಿಯನ್ನು ಮಾರಾಟಕ್ಕಿಟ್ಟನು.

ಆ ಹತ್ತಿಯನ್ನು ಅಲ್ಲಿ ಯಾರೂ ಕೊಳ್ಳುವವರಿಲ್ಲ. ಕೆಲವರು ಹತ್ತಿ ಶುದ್ಧವಾಗಿಲ್ಲವೆಂದರು. ಒಟ್ಟಿನ ಮೇಲೆ ಹತ್ತಿಗೆ ಗಿರಾಕಿ ಇಲ್ಲವೆಂದು ಗೊತ್ತಾಯಿತು.

ನಾಲ್ಕನೇಯವನಿಗೆ ಏನು ಮಾಡಬೇಕೆಂದು ತಿಳಿಯಲಿಲ್ಲ. ಅವನು ಗಾಡಿಯನ್ನು ನಡೆಸುತ್ತ ಬೀದಿಯಲ್ಲಿ ಸಾಗಿ, ಸ್ವಲ್ಪ ದಣುವಾರಿಸಿಕೊಳ್ಳಲಿಕ್ಕಾಗಿ ಒಂದು ಮನೆಯ ಜಗಲಿಯಲ್ಲಿ ಕುಳಿತನು.

ಆ ಜಗಲಿಯ ಒಂದು ಬದಿಯಲ್ಲಿ ಅಕ್ಕಸಾಲಿಗನು ಒಂದು ಕುಲುಮೆಯಲ್ಲಿ ಚಿನ್ನವನ್ನು ಹಾಕಿ ಕೊಳವಿಯಿಂದ ಊದಿಕೊಂಡಿದ್ದನು.

"ಏನು ಮಾಡುವಿರಿ ಅಗಸಾಲಿಯವರೇ?" ಎಂದು ನಾಲ್ಕನೇ ಮಗನು ಅವನನ್ನು ನೋಡಿ ಕೇಳಿದನು.

"ಚಿನ್ನವನ್ನು ಬೆಂಕಿಯಲ್ಲಿ ಹಾಕಿ ಶುದ್ಧ ಮಾಡುತ್ತೇನೆ ಅಯ್ಯಾ" ಎಂದ ಅಕ್ಕಸಾಲಿಗ.

ನಾಲ್ಕನೇ ಮಗನಿಗೆ ಹೊಸತೊಂದು ಉತ್ಸಾಹ ಬಂದ ಹಾಗಾಯಿತು. ಅವನು ಕೂಡಲೇ ತಾನು ತಂಗಿದ್ದ ಸ್ಥಳಕ್ಕೆ ಹಿಂದಿರುಗಿ, ಹತ್ತಿಯನ್ನೆಲ್ಲಾ ಕೆಳಗಿಳಿಸಿ, ದೊಡ್ಡದೊಂದು ಹೋಮಕುಂಡದಲ್ಲಿ ಅದನ್ನು ಹಾಕಿದನು. ಹತ್ತಿಯನ್ನು ಶುದ್ಧಮಾಡಲು ಇಷ್ಟು ಸುಲಭೋಪಾಯವಿರುವುದೆಂದು ಅವನಿಗೆ ಗೊತ್ತಿರಲಿಲ್ಲ. ಅದೀಗ ತಿಳಿದುದರಿಂದ ಉತ್ಸಾಹಾತಿರೇಕದಿಂದ ಸಿಳ್ಳು ಹೊಡೆಯುತ್ತಾ ಹತ್ತಿಯ ರಾಶಿಗೆ ಬೆಂಕೀ ಕೊಳ್ಳಿ ತಂದು ಹಾಕಿದನು. ಅಷ್ಟೂ ಹತ್ತಿ ಭಗ್ಗನೆ ಉರಿದು ಹಾರಿಹೋಯಿತು. ಅವನ ವ್ಯಾಪಾರವೂ ಕೊನೆಗಂಡಿತು. ಧನಿಕನು ತನ್ನ ಮಗಂದಿರ ಮೇಲೆ ಇಟ್ಟ ನಂಬುಗೆ ಕೂಡಾ ಕೊನೆಗಂಡಿತು.



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೫

### ಗೆದ್ದ ಶೀರ್ಷಿಕೆಗಳು ೧೯೮೦ ನವೆಂಬರ್ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ



Brahmdev



N. Pakkirisamy

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.

★ ಸೆಪ್ಟೆಂಬರ್ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.

★ ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂಪ್ಯಾ ೨೫ ಬಹುಮಾನ.

★ ಶೀರ್ಷಿಕೆಗಳನ್ನು ಪೋಸ್ಟುಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು-೬೦೦ ೦೨೬

---

## ಜೂಲೈ ಸ್ಪರ್ಧೆಯ ಫಲಿತಾಂಶ:

ಮೊದಲನೇ ಫೋಟೋ: **ಊಟಕ್ಕೆ ಸಾಕಷ್ಟು ಸಿಕ್ಕಿದರೆ**

ಎರಡನೇ ಫೋಟೋ: **ಆಟಕ್ಕೆ ಬೊಂಬೆಯೂ ಸಾಕು**

ಕಳುಹಿಸಿದವರು: ಆರ್. ವಿನೋದಾ ಮೋಹನಕುಮಾರ್

ಕಿರಾಣಿ ಅಂಗಡಿ, ಮಾರ್ಕೆಟ್, ಗದಗ.

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188, Arcot Road, Madras-600 026 (India). Controlling Editor: NAGI REDDI.

# ಚಂದಮಾಮ ಕ್ಯಾಮಲ್ ಬಣ್ಣಹಾಕುವ ಸ್ಪರ್ಧೆ

ಪ್ರವೇಶಧನವಿಲ್ಲ

**ಬಹುಮಾನ ಗಳಿಸಿರಿ.**

- ಕ್ಯಾಮಲ್— ಪ್ರಥಮ ಬಹುಮಾನ ರೂ. 15
- ಕ್ಯಾಮಲ್— ದ್ವಿತೀಯ ಬಹುಮಾನ ರೂ. 10
- ಕ್ಯಾಮಲ್— ತೃತೀಯ ಬಹುಮಾನ ರೂ. 5
- ಕ್ಯಾಮಲ್— 5 ಪ್ರೋತ್ಸಾಹಕ ಬಹುಮಾನಗಳು
- ಕ್ಯಾಮಲ್— 10 ಸರ್ಟಿಫಿಕೇಟ್‌ಗಳು



ಕೇವಲ 12 ವರ್ಷದ ವರೆಗಿನ ಪ್ರಾಯದ ವಿದ್ಯಾರ್ಥಿಗಳು ಭಾಗವಹಿಸಬಹುದು ■ ಮೇಲಿನ ಚಿತ್ರಕ್ಕೆ ಯಾವುದೇ 'ಕ್ಯಾಮಲ್' ಬಣ್ಣಗಳಿಂದ ಬಣ್ಣ ಹಾಕಿರಿ ■ ಬಣ್ಣ ಹಾಕಿದ ಪ್ರವೇಶಪತ್ರಗಳನ್ನು ಕೆಳಗಿನ ವಿಳಾಸಕ್ಕೆ ಕಳಿಸಿರಿ

**P.B. No. 9928, COLABA, Bombay-400 005.**

ಫಲಿತಾಂಶವು ಅಂತಿಮ ನಿರ್ಣಯವಾಗಿದೆ, ಮತ್ತು ಇದರ ಸಲುವಾಗಿ ಪತ್ರವ್ಯವಹಾರಕ್ಕೆ ಗಮನ ಕೊಡಲಾಗುವುದಿಲ್ಲ.

Name ______________________ Age ______________

Address ______________________________________

ದಯವಿಟ್ಟು ನಿಮ್ಮ ಹೆಸರು ಮತ್ತು ವಿಳಾಸವನ್ನು ಇಂಗ್ಲಿಷಿನಲ್ಲಿ ಬರೆಯಿರಿ.

ದಯವಿಟು ಚಿತ್ರವನ್ನು ಪೂರ್ತಿಯಾಗಿ ಬಣ್ಣದಿಂದ ತುಂಬಿರಿ.

ಪ್ರವೇಶಪತ್ರಗಳನ್ನು ಕಳುಹಿಸುವ ಕೊನೆಯ ತಾರೀಕು: *30-9-1980*

ಚುಕ್ಕಿ ಗೆರೆಯ ಉದ್ದಕ್ಕೂ ಕತ್ತರಿಸಿರಿ.

Vision

**CONTEST NO. 16**

# ಕಣ್ಣುಗಳನ್ನು ಮುಚ್ಚಿ ನಿಮಗೇನು ಬೇಕೆಂದು ನಿರ್ಧರಿಸಿ.



ಉಳಿತಾಯ ಮಾಡಿದರೆ ಬಯಕೆಗಳು ಈಡೇರುತ್ತವೆ. ಒಂದು ಸೈಕಲ್ಲೇ? ಒಂದು ಗೊಂಬೆಗಳ ಮನೆಯೇ? ಹೊಸ ಆಟದ ಸಾಮಾನೇ? ನಿಮ್ಮ ಹಣದಿಂದಲೇ ಖರೀದಿಸಬಹುದು. ಕೆನರಾ ಬ್ಯಾಂಕಿನ **ಬಾಲಕ್ಷೇಮ** ಠೇವಣಿ ಯೋಜನೆ ನಿಮಗಾಗಿ ಇದೆ. ಬೀಗದ ಕೈಯುಳ್ಳ ಸುಂದರವಾದ **ಬಾಲಕ್ಷೇಮ** ಉಳಿತಾಯ ಪೆಟ್ಟಿಗೆಯಲ್ಲಿ ನಾಣ್ಯಗಳ ಮೇಲೆ ನಾಣ್ಯಗಳನ್ನು ಶೇಖರಿಸಿ. ಪೆಟ್ಟಿಗೆ ತುಂಬಿದೊಡನೆ ಕೆನರಾ ಬ್ಯಾಂಕಿನಲ್ಲಿ ಜಮಾ ಮಾಡಿ ನಾಣ್ಯ ಸಂಗ್ರಹಣೆ ಪುನರಾರಂಭಿಸಿ. ನಾವೂ ಅದಕ್ಕೆ ಸೇರಿಸುವ ಕಾರಣ ನಿಮ್ಮ ಹಣ ಬೆಳೆಯುತ್ತದೆ. ಕೂಡಲೇ, ನಿಮಗೆ ಬೇಕಾದ್ದನ್ನು ಕೊಳ್ಳುವಷ್ಟು ದೊಡ್ಡದಾಗುತ್ತದೆ.

ನಿಮ್ಮ ಬಯಕೆ ಈಡೇರಲು ಎಂತಹ ಚಮತ್ಕಾರ! ಉಳಿತಾಯದ ಪಾಠಕ್ಕೆ ಎಂತಹ ಅದ್ಭುತ ಮಾರ್ಗ!

ಹೆಚ್ಚಿನ ವಿವರಗಳಿಗೆ ನಿಮ್ಮ ಸಮೀಪದ ಕೆನರಾ ಬ್ಯಾಂಕ್ ಶಾಖೆಗೆ ಭೇಟಿ ನೀಡಿ. **ಕಾಮಧೇನು**, **ವಿದ್ಯಾನಿಧಿ** ಮತ್ತು **ನಿರಂತರ** ನಮ್ಮ ಇತರ ವಿಶೇಷ ಯೋಜನೆಗಳು.

**ಬಾಲಕ್ಷೇಮ ಠೇವಣಿ ಯೋಜನೆ**




**ಕೆನರಾ ಬ್ಯಾಂಕ್**

(ಒಂದು ರಾಷ್ಟ್ರೀಕೃತ ಬ್ಯಾಂಕ್)

(ರಾಷ್ಟ್ರದಾದ್ಯಂತ)

1,200 ಕ್ಕೂ ಹೆಚ್ಚು ಶಾಖೆಗಳು

